CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೨೮, ೨೦೦೫ (ವೈಶಾಖ ೮, ಶಕ ವರ್ಷ ೧೯೨೭) | ಸಂಚಿಕೆ ೧೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2003-04ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯಯೋಜನೆಯಡಿ ಬಳ್ಳಾರಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲಾಗಿದ್ದ ಕೇಂದ್ರ ಪಾಲಿನ 0.30 ಲಕ್ಷ ರೂ.ಗಳ ಅನುದಾನವನ್ನು 2004-05ನೇ ಸಾಲಿನಲ್ಲಿ ಪುನರ್ ಮೌಲೀಕರಿಸಿ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 3 ಆರ್‌ಬಿಎಲ್: 2002 ದಿನಾಂಕ: 30.5.2003 ಹಾಗೂ ಸಮಸಂಖ್ಯೆಯ ತಿದ್ದುಪಡಿ ಆದೇಶ ದಿನಾಂಕ: 22.8.2003.
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತಿ, ಬಳ್ಳಾರಿ ಇವರ ಪತ್ರ ಸಂಖ್ಯೆ: ಜಿಪಂಬ: ಲೆಕ್ಕ: ಆರ್‌ಬಿಎಲ್:2003-04 ದಿನಾಂಕ: 9.9.2004.

**ಪ್ರಸ್ತಾವನೆ:**

ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯಯೋಜನೆಯಡಿ 2003-04ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಯ 3 ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವ ಸಲುವಾಗಿ ಉಲ್ಲೇಖ(1)ರ ಸರ್ಕಾರೀ ಆದೇಶದಲ್ಲಿ (ದಿನಾಂಕ: 30.5.2003) ಕೇಂದ್ರ ಪಾಲಿನ 0.30 ಲಕ್ಷ ರೂ.ಗಳ ಅನುದಾನವನ್ನು ಬಳ್ಳಾರಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲಾಗಿತ್ತು. ಹಾಗೂ ತದನಂತರ ಪರಿಷ್ಕೃತ ಲೆಕ್ಕಶೀರ್ಷಿಕೆಯನ್ನು ಒಳಗೊಂಡ ತಿದ್ದುಪಡಿ ಆದೇಶವನ್ನು (ದಿನಾಂಕ: 22.8.2003)ಸಹ ಹೊರಡಿಸಲಾಗಿತ್ತು. ಸದರಿ ಅನುದಾನವನ್ನು ಖಜಾನೆಯಿಂದ ಸೆಳೆಯಲು ಬಳ್ಳಾರಿ ಜಿಲ್ಲಾ ಖಜಾನೆಗೆ ಬಿಲ್ಲನ್ನು ಸಲ್ಲಿಸಲಾಗಿ, ಆ ಜಿಲ್ಲಾ ಖಜಾನಾಧಿಕಾರಿಗಳು ಸದರಿ ಬಿಲ್ಲಿನ ಕ್ಲೇಮಿಗೆ 051 ಆಬ್ಜೆಕ್ಟಿವ್ ಕೋಡ್ ಗಣಕೀಕರಣದಲ್ಲಿ ಸ್ವೀಕರಿಸುವುದಿಲ್ಲ ಎಂದು ಆಕ್ಷೇಪಣೆ ಮಾಡಿ, ಬಿಲ್ಲನ್ನು ಮಾನ್ಯ ಮಾಡದೇ ಹಿಂದಿರುಗಿಸಿರುತ್ತಾರೆಂದು ಬಳ್ಳಾರಿ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಉಲ್ಲೇಖ (2)ರ ಪತ್ರದಲ್ಲಿ ತಿಳಿಸಿರುತ್ತಾರೆ. ಪರಿಷ್ಕೃತ ಲೆಕ್ಕಶೀರ್ಷಿಕೆಯಂತೆ ಅನುದಾನ ಬಿಡುಗಡೆ ಬಗ್ಗೆ ಖಜಾನೆ ಇಲಾಖೆಯ ನೆಟ್‌ವರ್ಕ್ ಮ್ಯಾನೇಜ್‌ಮೆಂಟ್ ಸೆಂಟರ್ ಮುಖೇನ ಜಿಲ್ಲಾ ಖಜಾನೆಗಳಿಗೆ ಸೂಕ್ತ ನಿರ್ದೇಶನ ನೀಡಿದ್ದಾಗ್ಯೂ, ಬಳ್ಳಾರಿ ಜಿಲ್ಲಾ ಖಜಾನೆಯಲ್ಲಿ ಈ ಅನುದಾನವನ್ನು ಸೆಳೆಯಲು ಸಾಧ್ಯವಾಗಿರುವುದಿಲ್ಲ. ಸದರಿ ಅನುದಾನವನ್ನು ಸೆಳೆಯಲಾಗದ ಕಾರಣ ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸಲು ಸಾಧ್ಯವಾಗಿರುವುದಿಲ್ಲವೆಂದು ಹಾಗೂ ಆ ಅನುದಾನವನ್ನು ಪ್ರಸಕ್ತ ಸಾಲಿನಲ್ಲಿ (2004-05) ನವೀಕರಿಸಿ ಬಿಡುಗಡೆ ಮಾಡುವಂತೆ ಉಲ್ಲೇಖ (2)ರ ಪತ್ರದಲ್ಲಿ ಬಳ್ಳಾರಿ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಕೋರಿರುತ್ತಾರೆ.

ಜೀತವಿಮುಕ್ತರ ಪುನರ್ವಸತಿ ಕಾರ್ಯವನ್ನು ಸರ್ವೋಚ್ಚ ನ್ಯಾಯಾಲಯ ಹಾಗೂ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ನಿರ್ದೇಶನಗಳ ಹಿನ್ನೆಲೆಯಲ್ಲಿ ಆದ್ಯತೆ ಮೇರೆ ತುರ್ತಾಗಿ ಕೈಗೊಳ್ಳಬೇಕಾಗಿರುತ್ತೆ. ಈ ಕಾರ್ಯಕ್ರಮಕ್ಕೆ ಆರ್ಥಿಕ ಇಲಾಖೆಯು ಒದಗಿಸಿರುವ (ಹಿಂದಿನ ಸಾಲಿನಲ್ಲಿ ಅನುದಾನ ಬಿಡುಗಡೆ ಮಾಡಿರುವ) ಲೆಕ್ಕಶೀರ್ಷಿಕೆಯು "2230-ಕಾರ್ಮಿಕ ಮತ್ತು ಉದ್ಯೋಗ-01-ಕಾರ್ಮಿಕ-197-ತಾಲ್ಲೂಕು ಪಂಚಾಯತಿಗಳಿಗೆ ಸಹಾಯ-1-ಜೀತದಾಳುಗಳು-01-ಜೀತದಾಳುಗಳ ಪುನರ್ವಸತಿ-051-ಸಾಮಾನ್ಯ ವೆಚ್ಚಗಳು (ಯೋಜನೆ)" ಸರಿಯಾಗಿರುತ್ತದೆ. ಈ ಕಾರ್ಯಕ್ರಮಕ್ಕೆ ಸದರಿ ಲೆಕ್ಕಶೀರ್ಷಿಕೆಯಡಿ 2004-05ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಪ್ರಸ್ತಾವಿತ 0.30 ಲಕ್ಷ ರೂ.ಗಳ ಅನುದಾನವನ್ನು ಬಳ್ಳಾರಿ ಜಿಲ್ಲಾ ಪಂಚಾಯತಿಗೆ ಪುನರ್ ಮೌಲೀಕರಿಸಿ ಬಿಡುಗಡೆ ಮಾಡಲು ಸರ್ಕಾರವು ಪರಿಗಣಿಸಿರುತ್ತೆ.

ಆದಕ್ಕಾಗಿ ಈ ಆದೇಶ.

**ಸರ್ಕಾರೀ ಆದೇಶ ಸಂಖ್ಯೆ: ಗ್ರಾಅಪ 3 ಆರ್‌ಬಿಎಲ್ 2002 ಬೆಂಗಳೂರು ದಿನಾಂಕ: 16ನೇ ಮಾರ್ಚ್ 2005**

ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯಯೋಜನೆಯಡಿ ಬಳ್ಳಾರಿ ಜಿಲ್ಲೆಯ 3 ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವ ಸಲುವಾಗಿ 2003-04ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗಿದ್ದ ಕೇಂದ್ರ ಪಾಲಿನ 0.30 ಲಕ್ಷ ರೂ.ಗಳ (ಮೂವತ್ತು ಸಾವಿರ ರೂಪಾಯಿಗಳು ಮಾತ್ರ) ಅನುದಾನವನ್ನು ಮಾತ್ರ 2004-05ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಿಂದ ಪುನರ್ ಮೌಲೀಕರಿಸಿ ಬಳ್ಳಾರಿ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಲಾಗಿದೆ.

1. 2003-04ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗಿದ್ದ ಸದರಿ ಅನುದಾನವನ್ನು ಸೆಳೆಯದೇ ಇರುವ ಬಗ್ಗೆ ಖಜಾನೆಯಿಂದ Non-drawal Certificateನ್ನು ಪಡೆದು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
2. ಈ ಯೋಜನೆಗೆ ತಗಲುವ ವೆಚ್ಚವನ್ನು 2230-01-197-1-01-051 ಲೆಕ್ಕಶೀರ್ಷಿಕೆ ಅಡಿಯಲ್ಲಿಯೇ ಭರಿಸತಕ್ಕದ್ದು.
3. ಸರ್ಕಾರದ ದಿನಾಂಕ: 30.05.2003ರ ಆದೇಶ ಹಾಗೂ ದಿನಾಂಕ: 22.08.2003ರ ತಿದ್ದುಪಡಿ ಆದೇಶಗಳಲ್ಲಿನ ಎಲ್ಲಾ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.
4. ಸದರಿ ಅನುದಾನವನ್ನು 2005ರ ಮಾರ್ಚ್ ಮಾಹೆ ಅಂತ್ಯದೊಳಗೆ ತಪ್ಪದೇ ಖಜಾನೆಯಿಂದ ಸೆಳೆದು ಕಾಯ್ದಿರಿಸದೇ ಜೀತವಿಮುಕ್ತರ ಪುನರ್ವಸತಿಗಾಗಿ ಬಳಕೆ ಮಾಡತಕ್ಕದ್ದು.

ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂಖ್ಯೆ: ಗ್ರಾಅಪ: 53: ಪಿಬಿಎಸ್:05 ದಿನಾಂಕ: 28.2.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ. ಬಿ. ಹಿರೇಮಣಿಯವರ್**
ನಿರ್ದೇಶಕರು,
ಸ್ವಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಪಿ.ಆರ್.473

## INFRASTRUCTURE DEVELOPMENT SECRETARIAT

**Sub :** Release of funds in 2004-05 for the Hassan-Mangalore Gauge Conversion Project.

**Read :**
1. G.O. No. IDD 11 NSW 2001, dated: 22.10.2001.
2. G.O. No. IDD 11 NSW 2001, dated: 31.03.2003.
3. G.O. No. 41 NSW 2003, dated: 12.9.2003.
4. G.O. No. IDD 41 NSW 2003, dated: 4.11.2003.
5. G.O. No. IDD 41 NSW 2003, dated: 28.4.04.
6. Letter dated: 14.2.2005 and 16.03.05, from CEO, HMRDC, Bangalore.

**Preamble:**

1. In the Government Order read at (1) above, Government of Karnataka (Gok) had accorded sanction for incorporating a Special Purpose Vehicle (SPV) called the Hassan-Mangalore Rail Development Company (HMRDC) for implementing Hassan Mangalore Gauge Conversion Project (HMGCP). Gok and Ministry of Railways are expected to invest Rs. 45 crores each in the equity of HMRDC either directly or through K-RIDE So far Government of Karnataka have released Rs.28/- crores towards their share including Rs.10 crores contribution from VITC, Bangalore.
2. In the letter dated 4th April 2005 and 16.3.05 read at (6) above the CEO, HMRDC, has stated that the Railways has requested the State Government to release the balance of Rs. 17.00 Crores immediately to complete the work of Sakleshpur-Subramanya Road section within the Schedule time.
3. Gok have considered the matter and decided to release a further amount of Rs. 10.00 Crores as equity of Gok in HMRDC. Hence the following order.

**Government Order No. IDD 41 NSW 2003 (P) II Bangalore dated: 30th March 2005**

1. In the circumstances explained in the preamble, the Government of Karnataka are pleased to sanction the release of Rs.10.00 crores (Rupees Ten crores only) towards the expenditure on the HMGCP. This amount would subsequently be converted as the equity of Gok in HMRDC.
2. This expenditure shall be met from the sanction accorded to the reappropriation under the head of account "5465-01-190-2-02-100 BIAP State Support to the project to the Head of account "5465-01-190-3-02-211- Hassan Mangalore Guage Conversion project investments (Plan)"
3. The Chief Finance Officer (CFO) of iDeck is authorized to draw the said amount on Payee's Receipt duly countersigned by the Under Secretary to Government, Infrastructure Development Department and deposit the same with the Chief Executive Officer, Hassan Mangalore Rail Development Company, Bangalore.
4. This order issues in accordance with the Finance Department's sanction vide its G.O. No. FD 271(A) BRS/2005 dated: 26.03.2005.

By Order and in the name of the Governor of Karnataka,
**T. B. Renuka Prasad**
Under Secretary to Government,
Infrastructure Development Department.

PR-490

**Sub :** Release of funds to iDeck-regarding.

**Read :**
1. Letter No. iDeck/2004-05/1058 dated: 31.1.2004 from the Managing Director, iDeck, Bangalore.
2. Government Order No. IDD 03 DIA 2005 dated: 28.3.2005.

**Preamble:**

Keeping in view the Cabinet Decision of 21.12.2004, Finance Department was requested on 24.12.2004 to nominate an independent agency for verification of escalation in the Bangalore International Airport Project cost, and in their note dated: 12.1.2005 advised Infrastructure Development Department to utilize the services of iDeck and the iDeck was asked on 25.1.05 to give their proposal. iDeck in their proposal sent to Government read at (1) above, requested for payment of Rs. 9.5 lakhs being the services fees.

2. In G.O. No. read at (2) above, a sum of Rs. 4.75 lakhs was released being the 50% of the fees for providing advisory services for evaluation of the cost of escalation of the Bangalore International Airport Project.

3. Government have decided to release Rs.2 lakhs available in the Head of Account 3451-00-090-1-06-125-Secretariat Economic Services-Infrastructure Preliminary Studies-Other Expenditure-Modernization (Plan) 2004-05 to meet the cost of project studies entrusted to iDeck. Hence, this order.

**Government Order No. IDD 47 NSW 2004, Bangalore dated: 29th March 2005**

1. After careful examination of the proposal of iDeck, Government is pleased to release Rs.2 lakhs (Rupees two lakhs) only and this amount should be utilized for project studies entrusted to iDeck.

2. This cost would be met out of the available funds under the Head of Account 3451-00-090-1-06-125-Secretariat Economic Services-Infrastructure Preliminary Studies-Modernization (Plan) 2004-05.

3. The Chief Financial Officer (CFO) of iDeck would draw this amount on a payee's receipt duly countersigned by the Under Secretary to Government, Infrastructure Development Department.

4. This Order issues in accordance with the Finance Department's G.O. No. FD 1 TFP 2003 dated: 12.06.2003.

By Order and in the name of the Governor of Karnataka,

**T. B. Renuka Prasad**

Under Secretary to Government,

Infrastructure Development Department.

PR-491

**Government Order No. IDD 21 NSW 2005 Bangalore dated: 29th March 2005**

**Sub :** Release of funds for Sholapur Gadag Gauge Conversion Project regarding.

**Read :**
1. G.O.No. IDD 1 NSW 2003, dated: 03.03.2003.
2. G.O. No. IDD 1 NSW 2003, dated: 29.3.03.
3. G.O. No. IDD 40 NSW 03, dated: 16.9.2003.
4. G.O. No. IDD 95 NSW 03, dated: 22.1.2004.
5. G.O. No. IDD 42 NSW 2004, dated: 16.06.04.
6. Letter from the Chief Administrative Officer (Constructions) South Western Railway, Bangalore dated: 14.10.2004.
7. Note No. IDD 114 IDM 2004, dated: 30.12.2004.
8. G.O. No. FD 45 BRS 05, dated: 28.1.2005.
9. G.O. No. IDD 21 NSW 2005, dated: 22.02.05.
10. G.O. No. FD 271(B) BRS 05, dated: 26.3.2005.

**Preamble:**

1. In Continuation of the G.O. No. IDD 21 NSW 2005 Dated: 22.02.2005 and in the circumstances stated in the preamble of the said G.O. Government are pleased to release Rs.10 crores (Rupees ten crores only) towards the State Government's Share of the 50 percent of Sholapur Gadag Gauge Conversion Project.
2. This Expenditure shall be met from the sanction accorded to the reappropriation under the head of account "5465-01-190-2-02-100 BIAP State Support to the Project to the Head of Account "5465-01-190-3-03-211 Sholapur Gadag gauge conversion project-investments (Plan)"
3. The Chief Finance Officer of iDeck is authorized to draw the amount through a payee's receipt duly countersigned by the Under Secretary to Government, Infrastructure Development Department and iDeck shall in turn deposit the same with the Financial Adviser and Chief Accounts Officer, (Construction), South Western Railway, Bangalore.
4. The Chief Engineer, (Construction), South Western Railway, shall arrange to furnish monthly expenditure statement to the Infrastructure Development Department by the 5th of the succeeding month.

5. This order issues in accordance with the Finance Department's sanction vide G.O. No.FD 271(B) BRS 05, dated: 26.03.2005.

By Order and in the name of the Governor of Karnataka,

**T. B. Renuka Prasad**

PR-489

Under Secretary to Government,
Infrastructure Development Department.

**Sub :** Bangalore International Airport-release of funds during 2004-05 for providing alternative Connectivity after closure of existing roads passing through airport site

**Read :**
1. G.O. No. IDD 28 DIA 02, dated: 31.03.03.
2. G.O. No. IDD 28 DIA 02, dated: 12.02.04.
3. G.O. No. IDD 28 DIA 02, dated: 28.10.04.
4. Note FD 1485 Exp-1/2004, dated: 7.10.04.
5. G.O. No. 1485 Exp-1/2004, dated: 7.10.04.
6. G.O. No. IDD 28 DIA 02, dated: 22.12.04.
7. U.O.N. No. FD 1955/Exp-1/2004, date: 1.12.04.
8. U.O.N. No. FD 82/Exp-1/2005, date: 2.3.05.

**Preamble:**

In the G.O. dated: 31.3.03 read at Sl.No. (1) above sanction was accorded for providing alternate connectivity for the existing MDR on the BIAP Site near Devanahalli along the alignment recommended by KRDCL & KSIIDC by upgrading the road to MDR standards initially and with provision for upgrading to State highway standards. An amount of Rs.2.75 crores was released to KSIIDS for getting this work executed by KRDCL with stipulation 34 for releasing the remaining amount only after fully utilizing this advance.

In G.O. dated: 12.2.04 read at (2) above Govt. had sanctioned the revised estimates i.c. Rs.6.32 crores for the land cost and Rs. 4.44 crores as cost of road construction and 5% agency commission to KRDCL on the work component only, and further an amount of Rs. 1.25 crores and Rs. 7.30 crores were also released. This amount could not be drawn by KSIIDC due to the change in the procedure for drawal of funds, on account of introduction of token system and countersignature of Secretariat Officers on the Payees Receipt.

Further with Finance Department's concurrence vide its note dated 7.10.04 read at Sl.No.(4) sanction was accorded to release an amount of Rs.100 lakhs vide G.O. dated: 28.10.04 at Sl.No. 3 above for the above scheme out of the available provision of Rs.274.00 lakhs under the Head of account "5465-01-190-2-05-211" with a balance of Rs. 174.00 lakhs. As this amount was not sufficient to meet the total cost of the project i.e. 11.30 crores, Finance Department in G.O dated: 7.10.04 read at Sl.No. 5 also agreed for reappropriation of Rs.548.00 lakhs to be met out of the provisions under the Head of Account "5465-01-190-2-02-100" (plan) State Support to the Project Financial Assistance/ Relief-Head of Account 5465-01-190-2-05 (plan).

In Government Order dated: 22.12.04 read at Sl.No. 6 above the balance amount of Rs.174.00 lakhs and the reappropriated amount of Rs. 548.00 lakhs were released to KSIIDC. As regards the balance amount required for this road construction, Finance Department in its note dated: 1.12.04 read at Sl.No.7 had agreed to release Rs. 252.00 lakhs as additionality towards compensation for formation of alternate roads of BIAP in the S.E. 2004-05 (2nd instalment). Further in note dated: 2.3.2005 read at Sl.No.8 F.D. had concurred for the release of the balance of Rs.33.00 lakhs (out of the Rs.855.00 lakhs) and the additional amount of Rs. 252.00 lakhs totally (252+33) amounting to Rs.285.00 lakhs to be met out in the S.E. 2004-05 (II instalment). Hence to sanction release of this amount this order is issued.

**Government Order No. IDD 28 DIA 2002 Bangalore dated: 15th March 2005**

After careful consideration of the above Government sanction is accorded for the release of Rs. 285.00 lakhs (Rupees Two hundred & eighty five lakhs) only in the S.E. 2004-05 II installment under Head of Account 5465-01-190-2-05 (plan) for compensation of alternate road to BIAP.

The authorization to incur expenditure on the provisions provided in the S.E. 2004-05 has been issued vide F.D.'s letter No.FD 4 BSG 2005 dated: 22.2.05. The Managing Director, KSIIDC is authorized to draw the above amount i.e. of Rs.285.00 lakhs (Rupees Two hundred and eighty five lakhs only) on a payee's receipt countersigned by the Under Secretary to Government, Infrastructure Development Department.

This order is issued vide F.D's concurrence in U.O. No. FD 82 Exp.I/05, dated: 02.03.05.

By Order and in the name of the Governor of Karnataka,

**T. B. Renuka Prasad**

PR-459

Under Secretary to Government,
Infrastructure Development Department.

**Sub :** Advisory Services fee to iDeck for evaluation of cost escalation of BIAP.

**Read :** 1. Letter dated: 10.2.2005 of iDeck.

2. Do. Letter No. IDD 3 DIA 05, dated: 5.02.05.

**Preamble:**

In the letter dated: 10.2.2005 read at Sl.No.1, iDeck had sent a proposal of an invoice for Rs.4.75,000/- (Rupees four lakhs and seventy five thousand) towards 50% of total fee for providing advisory services for evaluation of cost escalation of the BIAP and requested for early release of the payment.

In pursuant to the cabinet decision on 21.12.04, F.D. was requested on 24.12.04 to nominate an independent agency for verification of escalation in the project cost of BIAP, F.D. had advised to utilize the services of iDeck. Accordingly iDeck was requested (to send a proposal in this regard) vide letter dated: 5.2.2005 read at Sl.No.2 to advise the government on correctness of the project of Bangalore International Airport Project

iDeck in their letter dated: 31.1.05 had sent a proposal setting out the scope of services tobe to be rendered i.e. 1) review of escalation in the project cost during the period of project development till date and 2) to conduct the services of a monitoring agency for Gok.

The proposal was further examined and iDeck proposal has accepted with the only modification that the remuneration of Rs. 4.75 lakhs as sought by iDeck will include service tax.

To facilitate release of 50% of the fee (inclusive of service tax) on award of assignment to iDeck for evaluation of cost escalation of BIAP, this order is issued

**Government Order No. IDD 03 DIA 2005 Bangalore dated: 28th March 2005**

After careful examination of the proposal Government are pleased to release an amount of Rs.4.75 lakhs (Rupees four lakhs and seventy five thousand) being the 50% of the fees (inclusion of service tax) on award of assignment, to iDeck, for evaluation of cost escalation of BIAP.

This cost would be met out of the balance Funds of State Support Allocation of Rs.44.52 crores of BIAP. Under the Head 5465-01-190-2-02-100 BIAP-State Support.

The Chief Finance Officer (CFO) of iDeck would draw this amount on a payee's receipt duly countersigned by the Under Secretary, Infrastructure Development Department.

This order issues in accordance with Finance Department's G.O. No. FD 1 TFP 2003, dated: 12.6.2003.

By Order and in the name of the Governor of Karnataka,

**T. B. Renuka Prasad**

Under Secretary to Government,

Infrastructure Development Department.

PR-460

**Sub :** Release of funds for construction of Road Over Bridge/ Under Bridge-reg.

**Read :** 1. G.O. No. IDD 26 NSW 2003, dated: 31.3.2003.

2. Letter from the Chief Finance Officer, iDeck No. iDeck/2004-05/908, dated: 14.12.04.

3. G.O.No. IDD 79 NSW 2004, dated: 23.3.2005.

**Preamble:**

1. Government in its order dated 31.3.2003 read at Sl.No. (1) above had accorded sanction for release of Rs.5/- crores through iDecK for onward release to the concerned Railway Authorities for construction of Road Over Bridge/Under Bridges appearing in the priority list in Karnataka.

2. For the current financial year, an allocation of Rs. 1 crore has been provided. So far Rs.31.26 lakhs has been released. [(i) Rs.12.11. lakhs for Land Acquisition for construction of approach Road for RoB on Bangalore-Mysore Railway line near Pandavapur Railway Station (ii) and Rs.19.15 lakhs for Land Acquisition to construct approach Road to RUB near Ramanagar station yard].

3. Government have decided that in continuation of the releases made in Government Order dated: 31.03.03, another Rs.50.00 lakhs (Rupees fifty lakh only) be released for RoB/RuB Projects for the purposes laid down in the said Government Order. Hence the following order.

**Government Order No. IDD 79 NSW 2004, Bangalore dated: 28th March 2005**

1. The continuation of the Government Order of even number dated 23.3.2005 and in the circumstances stated in the preamble of the said Government Order, Government are pleased to release Rs. 18,74,035 (Rupees eighteen lakhs seventy four thousand and thirty five only) for construction of Road Over Bridges, Road Under Bridges in the State.

2. This amount shall be met under the Head of Account "5465-01-190-3-04-K-RIDE-ROB/RUB Projects-211-Investments (Plan)"

3. The Chief Finance Officer (CFO) of iDeck would draw this amount on a payee's receipt duly countersigned by the Under Secretary, Infrastructure Development Department.

4. This order issues under the delegated financial power to principal Secretaries of the Administrative Departments of Government vide Government Order No. FD 1 TFP 2003, dated: 12.6.03.

By Order and in the name of the Governor of Karnataka,

**T. B. Renuka Prasad**

PR-461

Under Secretary to Government,
Infrastructure Development Department.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ವಿವಿದೋದ್ದೇಶ ತಾಂತ್ರಿಕ ವಿಭಾಗ, (MPED) ಬೆಂಗಳೂರು ಕಛೇರಿಯನ್ನು ಜಿಲ್ಲಾ ಪಂಚಾಯತ್ ತಾಂತ್ರಿಕ ವಿಭಾಗ ಎಂದು ಹಾಗೂ ಅಧೀನ ಉಪ ವಿಭಾಗಗಳನ್ನು ಜಿಲ್ಲಾ ಪಂಚಾಯತ್ ತಾಂತ್ರಿಕ ಉಪ ವಿಭಾಗಗಳೆಂತಲೂ ಎಂದು ಪುನರ್ ನಾಮಾಂಕಿತ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :** 1. ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ತಾಂತ್ರಿಕ ವಿಭಾಗ, ಬೆಂಗಳೂರು ನಗರ, ಬೆಂಗಳೂರು ಪತ್ರ ಸಂಖ್ಯೆ: ಕಾಅ:ಜಿಪಂತಾವಿ: ಬೆಂನ:ಸಿಬ್ಬಂದಿ: 04-05:1279: ದಿನಾಂಕ: 3.7.04.

**ಪ್ರಸ್ತಾವನೆ:**

ಬೆಂಗಳೂರು ನಗರ ಜಿಲ್ಲಾ ಪಂಚಾಯತ್ ಅಸ್ತಿತ್ವಕ್ಕೆ ಬಂದ ಮೇಲೆ ವಿವಿದೋದ್ದೇಶ ತಾಂತ್ರಿಕ ವಿಭಾಗ, ಮತ್ತು ಉಪ ವಿಭಾಗ ಕಛೇರಿಗಳು ಬೆಂಗಳೂರು ನಗರ ಜಿಲ್ಲಾ ಪಂಚಾಯತಿಯ ನಿಯಂತ್ರಣಕ್ಕೆ ಒಳಪಟ್ಟಿದ್ದು, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಂಗಳೂರು ನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ಬೆಂಜಿಪಂ: ಆಡಳಿತ(1):33: 95-96, ದಿನಾಂಕ: 4.10.95 ರಲ್ಲಿ ಈ ವಿಭಾಗ ಕಛೇರಿಯನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗವೆಂತಲೂ, ಉಪ ವಿಭಾಗಗಳನ್ನು ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ (ತಾಂತ್ರಿಕ) ಉಪ ವಿಭಾಗವೆಂತಲೂ ಹೆಸರಿಸಿ, ಆದೇಶ ಹೊರಡಿಸುವಂತೆ ಕೋರಲಾಗಿದ್ದು ಈ ಬಗ್ಗೆ ಯಾವುದೇ ಆದೇಶ ಇನ್ನೂ ಹೊರಬಿದ್ದಿಲ್ಲವೆಂದು, ಆದ್ದರಿಂದ ಸದರಿ ಆದೇಶದ ಲಭ್ಯತೆಯ ಕುರಿತು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರು ವಾರ್ಷಿಕ ತಪಾಸಣೆಯಲ್ಲಿ ಆಕ್ಷೇಪವ್ಯಕ್ತಪಡಿಸಿದ್ದು, ಈ ಆಕ್ಷೇಪಣೆಯು ಕಳೆದ ನಾಲ್ಕು ವರ್ಷಗಳಿಂದ ಬಾಕಿ ಉಳಿದಿರುತ್ತದೆಂದು ಹಾಗೂ ಈ ಸಾಲಿನ ವಾರ್ಷಿಕ ತಪಾಸಣೆಯಲ್ಲಿಯೂ ಸಹ ಈ ವಿಷಯವನ್ನು ಮಹಾಲೇಖಪಾಲರು ಗಂಭೀರವಾಗಿ ಪರಿಗಣಿಸಿ ಈ ವಿಷಯದಲ್ಲಿ ಸೂಕ್ತ ಕ್ರಮ ಕೈಗೊಳ್ಳುವಂತೆ ಸೂಚಿಸಿರುವುದಾಗಿ ತಿಳಿಸಿರುವುದರಿಂದ ಈ ವಿಭಾಗವನ್ನು ಜಿಲ್ಲಾ ಪಂಚಾಯತ್ ತಾಂತ್ರಿಕ ವಿಭಾಗ ಎಂದು ಹಾಗೂ ಅಧೀನ ಉಪ ವಿಭಾಗಗಳನ್ನು ಜಿಲ್ಲಾ ಪಂಚಾಯತ್ ತಾಂತ್ರಿಕ ಉಪ ವಿಭಾಗಗಳೆಂತಲೂ ಪದನಾಮ ಬದಲಾವಣೆ ಮಾಡಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ವಾರ್ಷಿಕ ತಪಾಸಣೆಯಲ್ಲಿ ಮಹಾಲೇಖಪಾಲರು ವ್ಯಕ್ತಪಡಿಸಿದ್ದ ಆಕ್ಷೇಪಣೆಗಳನ್ನು ಕೈಬಿಡಲು ಅನುವಾಗುವಂತೆ ವಿವಿದೋದ್ದೇಶ ತಾಂತ್ರಿಕ ವಿಭಾಗ, (MPED) ಬೆಂಗಳೂರು ಈ ಕಛೇರಿಯ ಹೆಸರನ್ನು ಜಿಲ್ಲಾ ಪಂಚಾಯತ್ ತಾಂತ್ರಿಕ ವಿಭಾಗ ಎಂದು ಹಾಗೂ ಆ ಕಛೇರಿಯ ಅಧೀನ ಉಪ ವಿಭಾಗಗಳನ್ನು ಜಿಲ್ಲಾ ಪಂಚಾಯತ್ ತಾಂತ್ರಿಕ ಉಪ ವಿಭಾಗಗಳೆಂದು ಪುನರ್ ನಾಮಾಂಕಿತ ಮಾಡಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 134 ಜಿಪಅ ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ ಜಿಲ್ಲಾ ಪಂಚಾಯತ್‌ನ ವ್ಯಾಪ್ತಿಯಲ್ಲಿರುವ ವಿವಿದೋದ್ದೇಶ ತಾಂತ್ರಿಕ ವಿಭಾಗ, (MPED) ಬೆಂಗಳೂರು ಈ ಕಛೇರಿಯನ್ನು ಜಿಲ್ಲಾ ಪಂಚಾಯತ್ ತಾಂತ್ರಿಕ ವಿಭಾಗ ಎಂದು ಹಾಗೂ ಅಧೀನ ಉಪ ವಿಭಾಗಗಳನ್ನು ಜಿಲ್ಲಾ ಪಂಚಾಯತ್ ತಾಂತ್ರಿಕ ಉಪ ವಿಭಾಗಗಳೆಂತಲೂ ಸರ್ಕಾರವು ಪುನರ್ ನಾಮಾಂಕಿತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸಿ. ಸುಂದರ**

ಪಿ.ಆರ್.463

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ :** 2004-2005ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣ ಬೆಂಗಳೂರು (ಗ್ರಾ), ಬಿಜಾಪುರ ಮತ್ತು ಕೋಲಾರ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡುವ (ಶೇ.25 ರಷ್ಟು ಹಂಚಿಕೆ) ಬಗ್ಗೆ.

**ಓದಲಾಗಿದೆ :**

1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ 17013:10:2004 ಎಸ್‌ಜಿಎಸ್‌ವೈ-1(13) ದಿನಾಂಕ: 22.04.2004 ಮತ್ತು (58) ದಿನಾಂಕ: 16.11.2004, (80) ದಿನಾಂಕ: 16.12.2004, (115) ದಿನಾಂಕ: 06.01.2005, (131) ದಿನಾಂಕ: 25.01.2005, (156) ದಿನಾಂಕ: 17.02.2005 (166) ದಿನಾಂಕ: 01.03.2005.
2. ಸಂಖ್ಯೆ ಆಇ 1091 ವೆಚ್ಚ-6: 2004 ದಿನಾಂಕ: 23.08.2004.
3. ಸರ್ಕಾರದ ಆದೇಶದ ಸಮಸಂಖ್ಯೆ ದಿನಾಂಕ: 17.09.2004, 29.12.2004, 10.01.2005, 27.01.2005, 04.03.2005, 05.03.2005 ಮತ್ತು 18.03.2005.
4. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: 17013:10:2004 ಎಸ್.ಜಿ.ಎಸ್.ವೈ:1 (178) ದಿನಾಂಕ: 14.03.2005.

**ಪ್ರಸ್ತಾವನೆ:**

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಉಲ್ಲೇಖಿತ ಪತ್ರ (1) ಮತ್ತು (3) ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್.ಜಿ.ಎಸ್.ವೈ) ಒಂದನೇ ಕಂತಿನ ಹಣ ರೂ.20,03,38,000-00 ಮತ್ತು ರೂ.6,67,79,000 ಗಳನ್ನು ಅನುಕ್ರಮವಾಗಿ ಬಿಡುಗಡೆ ಮಾಡಿದೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 22 ಜಿಲ್ಲೆಗಳಿಗೆ ಎರಡನೇ ಕಂತಿನ ಕೇಂದ್ರ ಪಾಲಿನ ಹಣ ರೂ.15,44,88,000 ಮತ್ತು 5,14,97-000 ಗಳನ್ನು ಬಿಡುಗಡೆ ಮಾಡಿವೆ. (ಓದಲಾದ ಕ್ರಮಸಂಖ್ಯೆ (1) ಮತ್ತು (3) ರಂತೆ) ಈಗ ಕೇಂದ್ರ ಸರ್ಕಾರ

ಓದಲಾದ ಕ್ರಮಸಂಖ್ಯೆ (4)ರಂತೆ ಬೆಂಗಳೂರು ಗ್ರಾಮಾಂತರ, ಬಿಜಾಪುರ ಮತ್ತು ಕೋಲಾರ ಜಿಲ್ಲಾ ಪಂಚಾಯತ್‌ಗಳಿಗೆ ರೂ.1,34,81-000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಹಣ ರೂ. 44,94-000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 18 ಸ್ವಜಯೋ 2004, ಬೆಂಗಳೂರು, ದಿನಾಂಕ: 22ನೇ ಮಾರ್ಚ್ 2005**

ರಾಜ್ಯ ಸರ್ಕಾರವು ಬೆಂಗಳೂರು (ಗ್ರಾ), ಬಿಜಾಪುರ ಮತ್ತು ಕೋಲಾರ ಜಿಲ್ಲಾ ಪಂಚಾಯತ್‌ಗಳಿಗೆ ಎರಡನೇ ಕಂತಿನ ಹಣ ರೂ.44,94,000-00 ಗಳನ್ನು (ರೂ. ನಲವತ್ನಾಲ್ಕು ಲಕ್ಷದ ತೊಂಬತ್ನಾಲ್ಕು ಸಾವಿರ ಮಾತ್ರ) ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿ.ಪಂ. ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ 2ನೇ ಕಂತು | ರಾಜ್ಯಸರ್ಕಾರ ಬಿಡುಗಡೆ ಮಾಡುತ್ತಿರುವ 2ನೇ ಕಂತು |
|---|---|---|---|---|---|
| 1. | ಬೆಂಗಳೂರು (ಗ್ರಾ) | 402 | 0300ZZ8001 | 37,57,000 | 12,52,000 |
| 2. | ಬಿಜಾಪುರ | 414 | 2800ZZ9152 | 91,31,000 | 30,44,000 |
| 3. | ಕೋಲಾರ | 404 | 0700ZZ8002 | 5,93,000 | 1,98,000 |
| | | | ಒಟ್ಟು | **1,34,81,000** | **44,94,000** |

1999ನೇ ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-07- ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ-ಯೋಜನೆ 2004-2005 (2501-01-196-1-07) ರಡಿ ಭರಿಸತಕ್ಕದ್ದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ, ಬಿಜಾಪುರ ಮತ್ತು ಕೋಲಾರ ಜಿಲ್ಲೆ ಇವರು ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2004-2005ನೇ ಸಾಲಿನ ಅನುಮೋದಿತ ವಾರ್ಷಿಕ ಕ್ರಿಯಾ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಅಭಿವೃದ್ಧಿ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ, ಬಿಜಾಪುರ ಮತ್ತು ಕೋಲಾರ ಜಿಲ್ಲೆ ಇವರುಗಳು ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ, ಬಿಜಾಪುರ ಮತ್ತು ಕೋಲಾರ ಜಿಲ್ಲೆ ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 86 ಪಿಬಿಎಸ್ 05 ದಿನಾಂಕ: 21.03.2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ. 34/05 ದಿನಾಂಕ: 22.03.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಬಿ. ಹಿರೇಮಣಿಯವರ್**

ಪಿ.ಆರ್.464

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ.ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ :** ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ. ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ಬಗ್ಗೆ.

**ಓದಲಾಗಿದೆ :**

1. ಮುಕಾನಿ, ಜಿಪಂ, ಪತ್ರ ಸಂ. ಜಿಪಂಬ:ಸಿ-3: ದಿನಗೂಲಿ: ಅಪೀಲು:29:01-02, ದಿನಾಂಕ: 03.08.2002.
2. ಶ್ರೀ ಎ. ವಿಜಯಕುಮಾರ್ ಹಾಗೂ ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ. ಇವರಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿನಾಂಕ: 18.10.03.
3. ಶ್ರೀ ಎ. ವಿಜಯಕುಮಾರ್ ಹಾಗೂ ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ. ಇವರು ದಿನಾಂಕ: 22.11.03 ಮತ್ತು 19.11.03 ರಂದು ನೀಡಿದ ಲಿಖಿತ ಹೇಳಿಕೆ.
4. ಆದೇಶ ಸಂ. ಗ್ರಾಅಪ 23 ಇಎನ್‌ಕ್ಯೂ 03, ದಿನಾಂಕ: 22.1.04.
5. ವಿಚಾರಣಾಧಿಕಾರಿಗಳ ದಿನಾಂಕ: 30.08.04ರ ವಿಚಾರಣಾ ವರದಿ
6. 2ನೇ ಕಾರಣ ಕೇಳುವ ನೋಟೀಸ್ ಸಂ. ಗ್ರಾಅಪ 23 ಇಎನ್‌ಕ್ಯೂ 03, ದಿನಾಂಕ: 22.1.04.
7. 2ನೇ ಕಾರಣ ಕೇಳುವ ನೋಟೀಸಿಗೆ ಸದರಿ ನೌಕರರು ನೀಡಿದ ಲಿಖಿತ ಉತ್ತರದ ದಿನಾಂಕ: 20.11.04 ಮತ್ತು 24.11.04.
8. ಆದೇಶ ಸಂ: ಗ್ರಾಅಪ 23 ಇಎನ್‌ಕ್ಯೂ 03, ದಿನಾಂಕ: 22.1.2005.
9. ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂ: ಪಿಎಸ್‌ಸಿ 151 ಸಿಎನ್‌ಎಸ್ 04, ದಿನಾಂಕ: 5.3.2005.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 3.08.02ರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 26932-26941/99 ರಲ್ಲಿ ದಿನಾಂಕ: 12.10.99 ರಂದು ನೀಡಿದ್ದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವಂತೆ ಸರ್ಕಾರವು ದಿನಾಂಕ: 4.11.2000, 10.1.2001 ಮತ್ತು 12.6.2001 ರಂದು ಬಳ್ಳಾರಿ ಜಿಲ್ಲಾ ಪಂಚಾಯತ್ ಕಛೇರಿಗೆ ಪತ್ರ ಬರೆದು ಆ ಬಗ್ಗೆ ನೆನಪೋಲೆಗಳನ್ನು ಹೊರಡಿಸಿದ್ದರೂ ಸಹ ಅಂದು ಸದರಿ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎ. ವಿಜಯಕುಮಾರ್ ಹಾಗೂ ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ. ಜಿಲ್ಲಾ ಪಂಚಾಯತ್, ಬಳ್ಳಾರಿ, ಇವರು ಸರ್ಕಾರದ ನಿರ್ದೇಶನದಂತೆ ಸಂಬಂಧಿಸಿದ ಪತ್ರಗಳ ಬಗ್ಗೆ ಮೇಲಾಧಿಕಾರಿಗಳಿಗೆ ಮಂಡಿಸದೆ ಮತ್ತು ಏನೂ ಕ್ರಮ ಕೈಗೊಳ್ಳದೇ ಇದ್ದುದರಿಂದ ಸದರಿ ತೀರ್ಪನ್ನು ಅನುಷ್ಠಾನ ಗೊಳಿಸಿಲ್ಲವೆಂದು ಅರ್ಜಿದಾರರಲ್ಲಿ ಕೆಲವರು ಶ್ರೀ ಜಾನ್ ವಿಲಿಯಂ ಮತ್ತು ಶ್ರೀ ಜೆ. ಯರ್‍ರಿಸ್ವಾಮಿ ಮತ್ತಿತರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಾಲಯದ ನಿಂದನಾ ಅರ್ಜಿಸಂಖ್ಯೆ: 2611/01 ಮತ್ತು 356-363/02ನ್ನು ದಾಖಲಿಸಿದ್ದರು. ಆದರೆ, ಅರ್ಜಿದಾರರೆಲ್ಲರೂ ದಿನಾಂಕ: 1.7.84ರ ನಂತರ ದಿನಗೂಲಿ ಸೇವೆಗೆ ಸೇರಿದವರಾಗಿದ್ದರೂ ಸಹ ಸದರಿ ನಿಂದನಾ ಅರ್ಜಿಯನ್ನು ವಜಾಗೊಳಿಸಲು ಬೇರೆ ದಾರಿ ಇಲ್ಲದೆ ಸರ್ಕಾರ ಅವರ ಸೇವೆಯನ್ನು ಸಕ್ರಮಗೊಳಿಸಲಾಯಿತು. ಆದ್ದರಿಂದ, ಮೇಲಿನ ಅರ್ಜಿದಾರರ ಸೇವೆಯನ್ನು ಸಕ್ರಮಗೊಳಿಸಲು ಕಾರಣರಾಗಿ, ಕರ್ತವ್ಯ ಲೋಪವೆಸಗಿರುವುದರಿಂದ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವ.ನೀ.ನೇ) ನಿಯಮಾವಳಿ 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರು ಪ್ರಸ್ತಾವನೆ ಸಲ್ಲಿಸಿದ್ದರು.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಎ. ವಿಜಯಕುಮಾರ್ ಹಾಗೂ ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ ಇವರುಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ತಮ್ಮ ಮೇಲಿನ ಆಪಾದನೆಗಳಿಗೆ ಸಂಬಂಧಿಸಿದಂತೆ ಆಪಾದಿತ ನೌಕರರು ಸದರಿ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಲಿಖಿತ ಹೇಳಿಕೆಗಳನ್ನು ಸಲ್ಲಿಸಿದ್ದು, ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಸದರಿಯವರ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಲಾಗಿ ಅವು ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಮತ್ತು ಇವರುಗಳು ಕರ್ತವ್ಯ ಲೋಪ ಮಾಡಿ ದುರ್ನಡತೆ ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಆಪಾದಿತರ ಮೇಲಿನ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಪ್ರಕರಣದಲ್ಲಿ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಆದೇಶ ಸಂಖ್ಯೆ: ಗ್ರಾಅಪ 23 ಇಎನ್‌ಕ್ಯೂ 03, ದಿನಾಂಕ: 22.1.04 ರಲ್ಲಿ ಬಳ್ಳಾರಿ ಜಿಲ್ಲಾ ಪಂಚಾಯತ್‌ನ ಉಪ ಕಾರ್ಯದರ್ಶಿ (ಆಡಳಿತ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಸದರಿ ಜಿಲ್ಲಾ ಪಂಚಾಯತ್‌ನ ಸಹಾಯಕ ಕಾರ್ಯದರ್ಶಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಪ್ರಕರಣದಲ್ಲಿ ವಿಚಾರಣೆ ನಡೆಸಿ ವರದಿ ಸಲ್ಲಿಸುವಂತೆ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ದಿನಾಂಕ: 30.08.04ರಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿ ಆಪಾದಿತರ ಮೇಲಿನ ಆರೋಪಗಳು ಸಾಬೀತಾಗಿರುತ್ತವೆಯೆಂದು ಅಭಿಪ್ರಾಯಪಟ್ಟಿದ್ದರಿಂದ, ಸದರಿ ವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿನಾಂಕ: 22.1.04 ರಲ್ಲಿ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಇವರುಗಳು 2ನೇ ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ದಿನಾಂಕ: 20.11.04 ಮತ್ತು 24.11.04 ರಲ್ಲಿ ಲಿಖಿತ ಉತ್ತರ ಸಲ್ಲಿಸಿ, ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿರುತ್ತಾರೆ. ವಿವರಗಳು ಕೆಳಕಂಡಂತಿವೆ.

**ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ. ಇವರ ಲಿಖಿತ ಉತ್ತರ:**

ಇವರು ಬಳ್ಳಾರಿ ಜಿಲ್ಲಾ ಪಂಚಾಯತ್ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ರಿಟ್ ಅರ್ಜಿ ಸಂ. 26932-26941/99ರ ಬಗ್ಗೆ ಸರ್ಕಾರಿ ವಕೀಲರಿಂದ ದಿನಾಂಕ: 29.9.99ರ ಪತ್ರ ಹಾಗೂ ಲಗತ್ತುಗಳನ್ನು ದಿನಾಂಕ: 30.9.99 ರಂದು ಪಡೆದು ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಕಡತ ಸಂ: 19:99-00ನ್ನು ದಿನಾಂಕ: 4.10.99 ರಂದು ಹಿರಿಯ ಅಧಿಕಾರಿಗಳಿಗೆ ಮಂಡಿಸಿರುವುದು ಮತ್ತು ದಿನಾಂಕ: 21.10.99ರ ಪತ್ರವನ್ನು ದಿನಾಂಕ: 26.10.99 ರಂದು ಪಡೆದು ಸೂಕ್ತ ಕ್ರಮಕ್ಕಾಗಿ ಹಿರಿಯ ಅಧಿಕಾರಿಗಳಿಗೆ ಮಂಡಿಸಿದ್ದಾರೆಂದು ನಂತರ ಹಿರಿಯ ಅಧಿಕಾರಿಗಳ ಆದೇಶದ ಮೇರೆಗೆ ಕೋರ್ಟು ಪ್ರಕರಣಗಳಿಗೆ ಸಂಬಂಧಿಸಿದ ಅಪೀಲು ಸಂಕಲನವನ್ನು ಮತ್ತು ಸದರಿ ಸಂಕಲನಕ್ಕೆ ಸಂಬಂಧಿಸಿದ ಎಲ್ಲಾ ಕಡತಗಳನ್ನು ದಿನಾಂಕ: 29.9.00 ರಂದು ಶ್ರೀ ಎ. ವಿಜಯಕುಮಾರ್ ಪ್ರ.ದ.ಸ. ಇವರಿಗೆ ಚಾರ್ಜ್‌ಲಿಸ್ಟ್‌ನ್ನು ವಹಿಸಿಕೊಟ್ಟಿರುವುದಾಗಿ, ಈ ಚಾರ್ಜ್ ಲಿಸ್ಟ್‌ನಲ್ಲಿ ಕಡತ ಸಂ.19:99-00 ಸಹ ಸೇರಿರುತ್ತದೆ. ಅಂದು ಸದರಿ ಕಡತ ಚಾರ್ಜ್‌ಲಿಸ್ಟ್‌ನಲ್ಲಿ ಇಲ್ಲವೆಂದು X ಗುರುತು ಮಾಡಿರುವುದಿಲ್ಲ. ನಂತರ ತನ್ನ ಬಳಿ ಇರುವ ಚಾರ್ಜ್‌ಲಿಸ್ಟ್‌ನಲ್ಲಿ ತಾನೇ X ಗುರುತು ಮಾಡಿ ಸದರಿ ಕಡತ ಸ್ವೀಕರಿಸಿಲ್ಲವೆಂದು ವಿಚಾರಣಾ ಸಮಯದಲ್ಲಿ ತನ್ನ ವಿರುದ್ಧ ಆಪಾದಿಸಿರುವುದಾಗಿ ತಿಳಿಸಿರುತ್ತಾರೆ.

**ಶ್ರೀ ಎ. ವಿಜಯಕುಮಾರ್ ಪ್ರ.ದ.ಸ. ಇವರ ಲಿಖಿತ ಉತ್ತರ:**

ಇಲ್ಲಿಯೂ ಸಹ ಕಡತ ಸಂ. 19:99-00ನ್ನು ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ. ಶ್ರೀ ಎ. ವಿಜಯಕುಮಾರ್, ಪ್ರ.ದ.ಸ.ರಿಗೆ ವಹಿಸಿಕೊಟ್ಟಿದ್ದಾರೆ ಎಂದು ಸಾಬೀತುಪಡಿಸದೆ ಶ್ರೀ ಎ. ವಿಜಯಕುಮಾರ್, ಪ್ರ.ದ.ಸ.ರು ಶ್ರೀ ಎಂ. ಈಶ್ವರಪ್ಪ, ಪ್ರ.ದ.ಸ.ಗೆ ವಹಿಸಿ ಕೊಟ್ಟಿಲ್ಲ ಎಂದಿಷ್ಟೆ ಹೇಳಲಾಗಿದೆ.

ಕಡತ ಸಂ.19:99-00ನ್ನು ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ. ಮಂಡಿಸಿರುತ್ತಾರೆ ಎಂದು ಎರಡನೇ ಸಾಕ್ಷಿಯವರು ಹೇಳಿದಾಗ, ಈ ಕಡತವನ್ನು ಪ್ರಾರಂಭಿಸಲು ಪ್ರಮುಖ ದಾಖಲಾತಿಗಳಾದ ಸರ್ಕಾರದ ಪತ್ರ ರಿಟ್ ಅರ್ಜಿ ಸಂ:26932-41:99 ಮತ್ತು ವಕೀಲರ ಪತ್ರ ಇತ್ಯಾದಿಗಳು ದಿನಾಂಕ: 5.12.2001 ರವರೆಗೆ ಸದರಿ ಪ್ರ.ದ.ಸ.ರ ಬಳಿ ಹೇಗೆ ಇರಲು ಸಾಧ್ಯ? ಮತ್ತು ನನಗೆ ಚಾರ್ಜ್ ಕೊಡುವಾಗಾಗಲೀ, ಸರ್ಕಾರದ ನೆನಪು ಪತ್ರಗಳು ಬಂದು ನಾನು ಜ್ಞಾಪಿಸಿದಾಗಾಗಲೀ ಅವುಗಳನ್ನು ನನಗೇಕೆ ಹಸ್ತಾಂತರಿಸಿಲ್ಲವೆಂದು ಯಾರೂ ಕೇಳಿಲ್ಲ.

ಮೂರನೆಯ ಸಾಕ್ಷಿಯವರು ತಮ್ಮ ಲಿಖಿತ ಹೇಳಿಕೆಯಲ್ಲಿ ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ.ರು ಸಲ್ಲಿಸಿರುವ ಚಾರ್ಜ್ ಲಿಸ್ಟ್‌ನ ಕ್ರಮ ಸಂಖ್ಯೆ: 66 ರೌಂಡ್ ಮಾಡಲಾಗಿದೆ ಎಂದು ಹೇಳಿರುತ್ತಾರೆ. ಈ ಹೇಳಿಕೆಯನ್ನು ವರದಿಯಲ್ಲಿ ಕಾಣಿಸಿಲ್ಲ. ಮಂಡನಾಧಿಕಾರಿಗಳು ವಿಚಾರಣಾ ಸಮಯದಲ್ಲಿ ನೆನಪೋಲೆ ಪತ್ರಗಳನ್ನು ಇವರು ಮೌಖಿಕವಾಗಿ ಅಧಿಕಾರಿಗಳಿಗೆ ತಿಳಿಸುವ ಬದಲು ಲಿಖಿತ ರೂಪದಲ್ಲಿ ನೀಡಿಲ್ಲವೆಂದು ಆಪಾದಿಸಿರುತ್ತಾರೆ. ಆದರೆ ನೆನಪೋಲೆ ಪತ್ರಗಳ ಮೇಲೆ ಅಧಿಕಾರಿಗಳು ಮಾಡಿರುವ ಸಹಿ ಮತ್ತು ಸಂಕಲನದ ಸಂಖ್ಯೆ ನಮೂದಿಸಿದೆ.

ವಿಚಾರಣಾಧಿಕಾರಿಗಳ ವರದಿಯು ಸಂಪೂರ್ಣವಾಗಿ ಬೇರೆಯವರ ತಪ್ಪು ಮಾರ್ಗದರ್ಶನದಿಂದಾಗಿ ಬರೆಯಲ್ಪಟ್ಟಿದೆ. ಆದ್ದರಿಂದ ಈ ಬಗ್ಗೆ ತಾವು ನ್ಯಾಯಯುತವಾದ ತೀರ್ಪನ್ನು ನೀಡಬೇಕೆಂದು ಕೋರಿರುತ್ತಾರೆ.

ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ. ಇವರು ಮೇಲಿನ ಪ್ಯಾರಾದಲ್ಲಿ ತಿಳಿಸಿರುವಂತೆ ಸದರಿ ಕಡತವನ್ನು ಶ್ರೀ ವಿಜಯಕುಮಾರ್, ಅಂದಿನ ಪ್ರ.ದ.ಸ. ಇವರಿಗೆ ವಹಿಸಿಕೊಟ್ಟಿರುವುದು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯೊಂದಿಗೆ ಸಲ್ಲಿಸಿರುವ ದಾಖಲೆಗಳಿಂದ ತಿಳಿದು ಬರುತ್ತದೆ. ಆದರೂ ಸಹ ಸರ್ಕಾರದಿಂದ ನೆನಪೋಲೆಗಳು ಹೊರಡಿಸಿದ ನಂತರವೂ ಸದರಿ ಕಡತ ಹಾಗೂ ಅದಕ್ಕೆ ಸಂಬಂಧಪಟ್ಟ ಪತ್ರಗಳನ್ನು ಸಾಕಷ್ಟು ವಿಳಂಬಿಸಿ ಶ್ರೀ ವಿಜಯಕುಮಾರ್ ಇವರಿಗೆ ವಹಿಸಿಕೊಟ್ಟಿರುವುದು ದಾಖಲೆಗಳಿಂದ ತಿಳಿದು ಬರುತ್ತದೆ.

ಶ್ರೀ ಎ. ವಿಜಯಕುಮಾರ್ ಅಂದಿನ ಪ್ರ.ದ.ಸ. ಇವರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿದ ಲಿಖಿತ ಉತ್ತರವನ್ನು ಪರಿಶೀಲಿಸಲಾಗಿದೆ, ಸದರಿ ಕಡತವನ್ನು ಶ್ರೀ ಜಿ. ಕೃಷ್ಣಮೂರ್ತಿ ಇವರಿಂದ ವಹಿಸಿಕೊಂಡನಂತರ ಸಹ ಸಕಾಲದಲ್ಲಿ ಮಂಡಿಸದೇ ಇರುವುದು. ಮತ್ತು ಇದಕ್ಕೆ ಸಂಬಂಧಪಟ್ಟ ನೆನಪೋಲೆ ಸ್ವೀಕೃತಿ ಪತ್ರಗಳು ಬಂದನಂತರ ಸಹ ಕಡತದಲ್ಲಿ ಮಂಡಿಸದೇ ಇರುವುದು ಕಂಡು ಬರುತ್ತದೆ. ಇವರು ಮಾಡಿರುವ ಈ ಕರ್ತವ್ಯ ಲೋಪದಿಂದಾಗಿ, ಸದರಿ ಜಿಲ್ಲಾ ಪಂಚಾಯತ್‌ನ ಕೆಲವು ದಿನಗೂಲಿ ನೌಕರರು ದಿನಾಂಕ: 1.7.84ರ ನಂತರ ನೇಮಕಗೊಂಡಿದ್ದರೂ ಸಹ, ನಿಯಮಗಳಲ್ಲಿ ಅವಕಾಶವಿಲ್ಲದಿದ್ದರೂ ಸಹ ಒಟ್ಟು 9 ಜನ ದಿನಗೂಲಿ ನೌಕರರ ಸೇವೆಯನ್ನು ವಿಧಿಯಿಲ್ಲದೆ ಅನಿವಾರ್ಯವಾಗಿ ಉಚ್ಚ ನ್ಯಾಯಾಲಯದ ಆದೇಶದಂತೆ ಸೇವೆ ಸಕ್ರಮಗೊಳಿಸಬೇಕಾಯಿತು.

ಇವರು ಮಾಡಿರುವ ಕರ್ತವ್ಯ ಲೋಪ, ಇತ್ಯಾದಿಗಳಿಂದಾಗಿ ಸರ್ಕಾರಕ್ಕೆ ಪ್ರತಿ ವರ್ಷ ಲಕ್ಷಾಂತರ ರೂಪಾಯಿ ಆರ್ಥಿಕ ಹೊರೆಯಾಗಿದೆ. ಆದ್ದರಿಂದ ಅವರು ನೀಡಿರುವ ಲಿಖಿತ ಉತ್ತರಗಳು ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಅವರು ನೀಡಿರುವ ವಿವರಣೆಯನ್ನು ಒಪ್ಪಲು ಯಾವುದೇ ಸಕಾರಣಗಳು ಇಲ್ಲದ ಕಾರಣ ವಿಚಾರಣಾ ವರದಿಯಲ್ಲಿ ಇವರುಗಳ ಮೇಲೆ ಮಾಡಿರುವ ಆರೋಪಗಳು ಸಾಬೀತಾಗಿದೆ ಎಂದು ತಿಳಿಸಿರುವುದರಿಂದ, ಆಪಾದಿತರ ಮೇಲಿನ ಸಾಬೀತಾದ ಆರೋಪಗಳಿಗೆ ಅನುಗುಣವಾಗಿ ಆಪಾದಿತರಿಗೆ ಸೂಕ್ತ ದಂಡನೆ ವಿಧಿಸಲು ಸರ್ಕಾರ ನಿರ್ಧರಿಸಿ. ಮೇಲೆ ಓದಲಾದ ಕ್ರಮ ಸಂ. (8) ರಲ್ಲಿ ಶ್ರೀ ಎ. ವಿಜಯಕುಮಾರ್, ಅಂದಿನ ಪ್ರ.ದ.ಸ. ಇವರಿಗೆ ಆದೇಶ ಸಂ. ಗ್ರಾಅಪ 23 ಇಎನ್‌ಕ್ಯೂ 03, ದಿನಾಂಕ: 22.1.2005 ರಂದು ದಂಡನೆ ವಿಧಿಸಿ, ಶ್ರೀ ಜಿ. ಕೃಷ್ಣಮೂರ್ತಿ, ಅಂದಿನ ಪ್ರದಸ ಇವರು ಈಗಾಗಲೇ ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಅವರಿಗೆ ದಂಡನೆ ವಿಧಿಸುವ ಬಗ್ಗೆ ಲೋಕಸೇವಾ ಆಯೋಗದ ಸಹಮತಿ ಪಡೆದು ನಂತರ ದಂಡನೆ ಆದೇಶ ಹೊರಡಿಸ ಲಾಗುವುದೆಂದು ತಿಳಿಸಲಾಗಿತ್ತು. ಆದರಂತೆ, ಮೇಲೆ ಓದಲಾದ ಕ್ರಮ ಸಂ. (9) ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗವು ಸಹಮತಿ ನೀಡಿದ್ದು ಶ್ರೀ ಜಿ. ಕೃಷ್ಣಮೂರ್ತಿ, ಅಂದಿನ ಪ್ರದಸ, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರಿಗೆ, ಇವರ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷತನದಿಂದಾಗಿ ಸರ್ಕಾರಕ್ಕೆ ಅಪಾರ ನಷ್ಟ ಆಗಿರುವುದರಿಂದ ಅವರ ಡಿ.ಸಿ.ಆರ್.ಜಿ. ಯನ್ನು ಪೂರ್ಣವಾಗಿ ವಸೂಲು ಮಾಡುವುದು ಹಾಗೂ ಪಿಂಚಣಿಯಿಂದ ಶೇಕಡಾ 50 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಸರ್ಕಾರ ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 23 ಇಎನ್‌ಕ್ಯೂ 03 ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ. ಕೃಷ್ಣಮೂರ್ತಿ, ಅಂದಿನ ಪ್ರದಸ, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರು ಮಾಡಿರುವ ಕರ್ತವ್ಯ ಲೋಪ, ಹಾಗೂ ಇವರ ಬೇಜವಾಬ್ದಾರಿತನ ಮತ್ತು ನಿರ್ಲಕ್ಷತನದಿಂದಾಗಿ ಸರ್ಕಾರಕ್ಕೆ ಅಪಾರ ನಷ್ಟ ಆಗಿರುವುದರಿಂದ, ಸದರಿ ನಷ್ಟ ಹಾಗೂ ಇವರ ಕರ್ತವ್ಯ ಲೋಪಕ್ಕನುಗುಣವಾಗಿ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ ಕೆ.ಸಿ.ಎಸ್.ಆರ್. ನಿಯಮ 214 ರಂತೆ ಅವರ ಡಿ.ಸಿ.ಆರ್.ಜಿ. ಯನ್ನು ಪೂರ್ಣವಾಗಿ ವಸೂಲು ಮಾಡುವುದು ಹಾಗೂ ಪಿಂಚಣಿಯಿಂದ ಶೇಕಡಾ 50 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಸಿ. ಸುಂದರ**
ಪಿ.ಆರ್.465
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಎಸ್. ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ, ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ಜಿಲ್ಲೆ ಇವರ ವಿರುದ್ಧ ದಾಖಲಾದ ಲೋಕಾಯುಕ್ತ ದಾಳಿ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು ಆದೇಶ.

**ಓದಲಾಗಿದೆ :**
1. ಪೊಲೀಸ್ ಇನ್‌ಸ್ಪೆಕ್ಟರ್ ಹಾಗೂ ತನಿಖಾಧಿಕಾರಿಗಳು, ಲೋಕಾಯುಕ್ತ ಪೊಲೀಸ್ ಠಾಣೆ, ಧಾರವಾಡ ಇವರ ಅಂತಿಮ ವರದಿ ಸಂಖ್ಯೆ: ಪಿ.ಐ/ ಕೆಎಲ್‌ಎ/ಗುನ್ನ ನಂ.9.2000/04-05, ದಿನಾಂಕ: 14.12.2004.
2. ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ:ತನಿಖೆ: ಜಿ-21/ಸಿಆರ್-9/2000- ಡಿಹೆಚ್‌ಆರ್, ದಿನಾಂಕ: 18.12.2004.

**ಪ್ರಸ್ತಾವನೆ:**

ಶ್ರೀ ಎಸ್. ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ, ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ಇವರ ವಿರುದ್ಧ ಗುನ್ನೆ ಸಂಖ್ಯೆ:9/2000 ರಲ್ಲಿ ಧಾರವಾಡ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಪ್ರಕರಣದ ತನಿಖಾಧಿಕಾರಿಯ ತನಿಖೆಯ ವರದಿಯ ನಕಲು (ಮೇಲೆ-1ರಲ್ಲಿ ಓದಲಾಗಿರುವ) ಮತ್ತು ತನಿಖಾ ದಾಖಲಾತಿಗಳನ್ನು, ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ-(2)ರಲ್ಲಿ ಓದಲಾದ ಪತ್ರವನ್ನು ಕಳುಹಿಸುತ್ತಾ ಶ್ರೀ ಎಸ್. ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ, ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ಇವರನ್ನು ಘನ ನ್ಯಾಯಾಲಯದಲ್ಲಿ ಲಂಚ ನಿರೋಧಕ ಕಾಯ್ದೆ, 1988ರ ಕಲಂ 19(1)(ಸಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರದ ಪ್ರಕಾರ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಬೇಕೆಂದು ಕೋರಿರುತ್ತಾರೆ.

ಶ್ರೀ ಎಸ್. ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ, ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ರವರು ಬಲ್ಲ ಮೂಲಗಳ ಆದಾಯಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆಂದು ತಿಳಿದುಬಂದ ವಿಶ್ವಾಸಾರ್ಹ ಮಾಹಿತಿಯನ್ವಯ ಸದರಿ ಅಪಾದಿತರ ವಿರುದ್ಧ ಪೊಲೀಸ್ ಇನ್ಸ್‌ಸ್ಪೆಕ್ಟರ್, ಪೊಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ ಧಾರವಾಡ ಇವರು ದಿನಾಂಕ: 2.11.2000 ರಂದು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ)ರ ಜೊತೆ ಕಲಂ 13(2)ರ ಪ್ರಕಾರ ಮೊಕದ್ದಮೆ ಸಂಖ್ಯೆ:9/2000ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ. ಹಾಗೂ ಘನ ನ್ಯಾಯಾಲಯದಿಂದ ಶೋಧನಾ ಆದೇಶವನ್ನು ಪಡೆದು ಆರೋಪಿತ ಅಧಿಕಾರಿಗೆ ಸೇರಿದ ಮನೆ, ಲಾಕರ್ ಮತ್ತು ಇತರ ಸ್ಥಳಗಳು ಇವುಗಳ ಮೇಲೆ ದಾಳಿ ನಡೆಸಿ ಶೋಧಿಸಿದಾಗ ಕಂಡು ಬಂದ ಚರ ಮತ್ತು ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ದಾಖಲೆಗಳು ಸೇರಿದಂತೆ ಒಂದು ವಿವರವಾದ ಪಂಚನಾಮೆಯನ್ನು ಮಾಡಿರುತ್ತಾರೆ.

ತನಿಖೆಯ ಉದ್ದೇಶಕ್ಕಾಗಿ ಚೆಕ್ ಅವಧಿಯನ್ನು ದಿನಾಂಕ: 11.4.1977 (ಆಪಾದಿತರು ಸೇವೆಗೆ ಸೇರಿದ ದಿನಾಂಕ) ರಿಂದ ದಿನಾಂಕ: 3.11.2000 (ಆಪಾದಿತರ ಮನೆಯನ್ನು ಶೋಧನೆ ಮಾಡಿದ ದಿನಾಂಕ) ರವರೆಗೆ ನಿಗದಿಪಡಿಸಿಕೊಂಡಿರುತ್ತಾರೆ. ತನಿಖೆಯು ಪೂರ್ಣಗೊಂಡ ನಂತರ ಆಪಾದಿತರ ವಶದಲ್ಲಿದ್ದ ಒಟ್ಟು ಆಸ್ತಿ, ಖರ್ಚು ಮತ್ತು ಆದಾಯಗಳ ಒಟ್ಟು ಮೊತ್ತವು ಈ ಕೆಳಕಂಡಂತಿರುತ್ತದೆಂದು ತಿಳಿಸಿದ್ದಾರೆ.

| | | |
|---|---|---|
| ಇ | ಚೆಕ್ ಅವಧಿಯಲ್ಲಿ ಕಂಡುಬಂದ ಅಪಾದಿತರ ಚರ ಮತ್ತು ಸ್ಥಿರಾಸ್ತಿಗಳ ಒಟ್ಟು ಮೊತ್ತ. | ರೂ.43,37,965-47 |
| ಉ | ಚೆಕ್ ಅವಧಿಯಲ್ಲಿ ಕಂಡುಬಂದ ಅಪಾದಿತ ಹಾಗೂ ಆತನ ಕುಟುಂಬದವರ ಖರ್ಚಿನ ಒಟ್ಟು ಮೊತ್ತ. | ರೂ.20,10,878-45 |
| | **ಒಟ್ಟು ಮೊತ್ತ** | ರೂ.63,48,843-92 |
| ಊ | ಚೆಕ್ ಅವಧಿಯಲ್ಲಿ ಬಲ್ಲ ಮೂಲಗಳಿಂದ ಕಂಡು ಬಂದ ಆಪಾದಿತರ ಒಟ್ಟು ಆದಾಯ | ರೂ.34,74,278-76 |
| ಋ | ಆಪಾದಿತರು ಹೊಂದಿರುವ ಅಧಿಕ ಪ್ರಮಾಣದ ಆಸ್ತಿಯ ಮೊತ್ತ. | ರೂ. 28,74,565-16<br>ಶೇಕಡ 82.74 |

ಈ ಚೆಕ್ ಅವಧಿಯಲ್ಲಿ ಅಪಾದಿತ ಅಧಿಕಾರಿಯವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ರೂ.28,74,565-16 ರಷ್ಟು ಅಂದರೆ ಶೇ. 82.74ರಷ್ಟು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂಬುದು ಕಂಡು ಬಂದಿದ್ದು, ಅಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ)ರ ಜೊತೆ 13(2)ರ ಅಡಿಯಲ್ಲಿ ಅಪರಾದ ಎಸಗಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ ಎಂದು ಪೊಲೀಸ್ ಮಹಾ ನಿರೀಕ್ಷಕರು ತಿಳಿಸಿರುತ್ತಾರೆ ಹಾಗೂ ಈ ಸಂಬಂಧ ತನಿಖಾಧಿಕಾರಿಗಳ ಅಂತಿಮ ವರದಿಯ ಪ್ರತಿ, ಆಸ್ತಿ ಮತ್ತು ದಾಯತ್ವದ ಪ್ರತಿಗಳನ್ನು ಒದಗಿಸಿರುತ್ತಾರೆ.

ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಒದಗಿಸಿರುವ ತನಿಖಾ ವರದಿಯ ಪ್ರತಿ ಹಾಗೂ ಇತರ ದಾಖಲಾತಿಗಳನ್ನು ಪರಿಶೀಲಿಸಿದಾಗ ಶ್ರೀ ಎಸ್. ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ, ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ಇವರು ತಮ್ಮ ಬಲ್ಲ ಮೂಲಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂಬುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಗೋಚರವಾಗಿರುತ್ತದೆ. ಆದ ಕಾರಣ ಅಪಾದಿತರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಜೊತೆ 13(2)ರ ಅಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಸಾಕ್ಷಿ ಪುರಾವೆಗಳು ಲಭ್ಯವಾಗಿರುವುದರಿಂದ ಅಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಸ್. ಆರ್. ಕುಲಕರ್ಣಿಯವರು ಲಂಚ ನಿರೋಧಕ ಕಾಯ್ದೆ 1988ರ ಪ್ರಕಾರ ಶಿಕ್ಷಾರ್ಹ ಅಪರಾಧವೆಸಗಿರುವುದನ್ನು ಮನಗಂಡ ಸರ್ಕಾರವು ಅವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 13(1)(ಇ) ಮತ್ತು ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ತೀರ್ಮಾನಿಸಿದೆ.

ಶ್ರೀ ಎಸ್. ಆರ್. ಕುಲಕರ್ಣಿ, ಇವರನ್ನು ಹುದ್ದೆಯಿಂದ ವಜಾ ಮಾಡುವ ಸಕ್ಷಮ ಪ್ರಾಧಿಕಾರ ಸರ್ಕಾರವಾಗಿರುವುದರಿಂದ, ಈ ಪ್ರಕರಣಕ್ಕೆ ಸಂಬಂಧಿಸಿದ ಸಂದರ್ಭಗಳು, ನಡವಳಿಗಳು ಆದಂತಹ ಸರ್ಕಾರಕ್ಕೆ ಸಲ್ಲಿಸಲ್ಪಟ್ಟಂತಹ ದಾಖಲಾತಿಗಳು ಮತ್ತು ಮಹತ್ವದ ಸಾಕ್ಷ್ಯಗಳ ಸೂಕ್ಷ್ಮಾವಲೋಕನದ ನಂತರ ಸಕ್ಷಮ ಪ್ರಾಧಿಕಾರಿಯು ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಮನವರಿಕೆ ಮಾಡಿಕೊಂಡು ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ, ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ಇವರನ್ನು ಇವರ ಸದರಿ ಅಪರಾಧಕ್ಕಾಗಿ ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸುವುದು ಸೂಕ್ತವೆಂದು ತೀರ್ಮಾನಕ್ಕೆ ಬರಲಾಗಿದೆ ಹಾಗೂ ಅಭಿಯೋಗಕ್ಕೆ ಆದೇಶವನ್ನು ಕಡತದಲ್ಲಿ ಸರ್ಕಾರ ಸೂಕ್ತ ಆದೇಶ ಹೊಂದಿದೆ. ಅದಕ್ಕನುಸಾರವಾಗಿ ಈಗ ಸರ್ಕಾರವು ಆದೇಶವನ್ನು ಹೊರಡಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 01 ಮುನೋಸೇ (2) 2005, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2005**

ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಸಿ)ರಲ್ಲಿ ಪ್ರದತ್ತವಾದ ಅಧಿಕಾರದೊಡನೆ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎಸ್.ಆರ್. ಕುಲಕರ್ಣಿ, ಹಿಂದಿನ ಉಪ ನೋಂದಣಾಧಿಕಾರಿ, ಹುಬ್ಬಳ್ಳಿ, ಧಾರವಾಡ ಜಿಲ್ಲೆ, ಹಾಗೂ ಹಾಲೀ ಹಿರಿಯ ಉಪ ನೋಂದಣಾಧಿಕಾರಿ, ಗದಗ್ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಪ್ರಕರಣ 13(1)(ಇ)ನ ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಈ ಮೂಲಕ ಆದೇಶಿಸಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರ ಅಡಿಯಲ್ಲಿ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: 23.03.2005ರ ದಿನಾಂಕದಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪಿ. ಮಂಜುನಾಥ್**

ಪಿ.ಆರ್.477

ಪೀಠಾಧಿಕಾರಿಗಳು, ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ).

**ವಿಷಯ :** ಶ್ರೀ ಎಸ್. ಎಂ. ಪಡಶೆಟ್ಟಿ, ಹಿಂದಿನ ತಹಶೀಲ್ದಾರ್, ಬಿಜಾಪುರ ಹಾಲಿ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ :**
1. ಬಿಜಾಪುರ ಜಿಲ್ಲಾಧಿಕಾರಿಯವರ ದಿನಾಂಕ: 4.9.2002ರ ಅ.ಸ.ಪತ್ರ ಸಂಖ್ಯೆ: ಆರ್ಬಿ/ಡಿಪಿಇ/ 4/02-03.
2. ದಿನಾಂಕ: 23.4.2004ರ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 15 ಎಡಿಇ 2004.
3. ಶ್ರೀ ಎಸ್. ಎಂ. ಪಡಶೆಟ್ಟಿ ಇವರ ದಿನಾಂಕ: 13.5.2004ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಎಸ್. ಎಂ. ಪಡಶೆಟ್ಟಿ, ಹಿಂದಿನ ತಹಶೀಲ್ದಾರ್, ಬಿಜಾಪುರ ತಾಲ್ಲೂಕು, ಹಾಲಿ ನಿವೃತ್ತರು ಇವರು ಸದರಿ ತಾಲ್ಲೂಕಿನ ತಹಶೀಲ್ದಾರ್ ರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಕೊಂಡಿಬಾ ಕುಸೇಬಾ ಸಿಂಧೆ ಸಾ: ಖಿಲಾರಟ್ಟಿ, ತಾಲ್ಲೂಕು ಬಿಜಾಪುರ ಇವರಿಗೆ ಕಾಡು ಕುರುಬ ಎಂದು ಪರಿಶಿಷ್ಟ ಪಂಗಡ ಜಾತಿಗೆ ಪ್ರಮಾಣ ಪತ್ರ ನೀಡಲು ಸಾಧ್ಯವಿರುವುದಿಲ್ಲವೆಂದು ದಿನಾಂಕ: 3.8.99 ರಂದು ಅವರಿಗೆ ತಿಳಿಸಿರುತ್ತಾರಾದರೂ, ದಿನಾಂಕ: 9.2.2000 ದಂದು ಅವರ ಮಗ ಶ್ರೀ ಮಾರುತಿ ಕೊಂಡಿಬಾ ಸಿಂಧೆ ಎಂಬುವವರಿಗೆ ಕಾಡು ಕುರುಬ ಎಂದು ಪರಿಶಿಷ್ಟ ಪಂಗಡ ಜಾತಿಯ ನಕಲಿ ಜಾತಿ ಪ್ರಮಾಣ ಪತ್ರವನ್ನು ನೀಡಿರುವುದಾಗಿ, ಆ ಬಗ್ಗೆ ಸದರಿ ನಿವೃತ್ತ ಅಧಿಕಾರಿ ಯಾವುದೇ ದಾಖಲಾತಿಗಳನ್ನು ಪರಿಶೀಲಿಸದೆ ಅಂತಹ ಪ್ರಮಾಣ ಪತ್ರವನ್ನು ನೀಡಿರುವುದರಿಂದ ಕರ್ತವ್ಯಲೋಪ ಎಸಗಿರುತ್ತಾರೆ ಎಂಬ ಕಾರಣದಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಬಿಜಾಪುರ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಅಧಿಕಾರಿಯ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4ರವರೆಗೆ) ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಎಸ್. ಎಂ. ಪಡಶೆಟ್ಟಿ ಇವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧದ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗೆಳೆದಿರುತ್ತಾರೆ. ಆದುದರಿಂದ ಆರೋಪಿತ ಅಧಿಕಾರಿಯ ವಿರುದ್ಧದ ಆರೋಪಗಳು ಹಾಗೂ ಇದಕ್ಕೆ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಸರಕಾರವೂ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 15 ಎಡಿಇ 2004, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಗಳ ನಿಯಮ 11 ರಡಿಯಲ್ಲಿ ಹಾಗೂ ಶ್ರೀ ಎಸ್. ಎಂ. ಪಡಶೆಟ್ಟಿ, ಹಿಂದಿನ ತಹಶೀಲ್ದಾರ್, ಬಿಜಾಪುರ, ಇವರು ಸೇವೆಯಿಂದ ಹಾಲಿ ನಿವೃತ್ತರಾಗಿರುವುದರಿಂದ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುರುವಿಹಾಳ್ ಅಂಚೆ, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿಜಾಪುರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ರಾಯಚೂರು ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 4.3.2002 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬಿಜಾಪುರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಮಹಂತೇಶಯ್ಯ**

ಪಿ.ಆರ್.478 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

**ವಿಷಯ :** ಶ್ರೀ ಎಸ್. ಡಿ. ಸ್ವಾದಿ, ಹಿಂದಿನ ತಹಶೀಲ್ದಾರ್, ಭಾಲ್ಕಿ ತಾಲ್ಲೂಕು ಬೀದರ್ ಜಿಲ್ಲೆ, ಹಾಲಿ ನಿವೃತ್ತರು ಮತ್ತು ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ :**

1. ಬೀದರ್ ಜಿಲ್ಲೆಯ ಜಿಲ್ಲಾಧಿಕಾರಿಯವರ ದಿನಾಂಕ: 20.06.2003ರ ಪತ್ರ ಸಂಖ್ಯೆ: ಕಂ/ಸಿಬ್ಬಂದಿ/ವಿಚಾರಣೆ/ಸಿಆರ್:23/ 2002-03/3393.
2. ದಿನಾಂಕ: 6.4.2004ರ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 9 ಎಡಿಇ 2004.
3. ಲಿಖಿತ ಉತ್ತರ.
   1) ಶ್ರೀ ಸುಭಾಷ್, ಗ್ರಾಮಲೆಕ್ಕಿಗ, ದಿನಾಂಕ: 14.05.2004.
   2) ಶ್ರೀ ಎಸ್. ಡಿ. ಸ್ವಾದಿ, ನಿವೃತ್ತ ತಹಶೀಲ್ದಾರ್, ದಿನಾಂಕ: 20.05.2004.
   3) ಶ್ರೀ ಕಾಶಿನಾಥ್‌ರಾವ್, ಕಂದಾಯ ನಿರೀಕ್ಷಕ, ದಿನಾಂಕ: 10.06.2004.

**ಪ್ರಸ್ತಾವನೆ:**

ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಭಾತಂಬ್ರಾ ಗ್ರಾಮದ ಸರ್ವೆ ನಂ:162/3ರ 2 ಎಕರೆ 20 ಗುಂಟೆ ಜಮೀನನ್ನು 1961ರ ಕರ್ನಾಟಕ ಭೂ ಸುಧಾರಣೆ ಕಾಯಿದೆ ಕಲಂ 79(ಬಿ) ಉಲ್ಲಂಘಿಸಿ ಶ್ರೀ ದಸ್ತಗೀರ, ಅಧ್ಯಕ್ಷರು, ದಾರೂಲ ಉಲುಮ ಅರಬಿಯಾ ಇಸ್ಲಾಮಿಯಾ ಸಂಸ್ಥೆ, ಭಾತಂಬ್ರಾ ಇವರ ಹೆಸರಿಗೆ ಕಾನೂನು ಬಾಹಿರವಾಗಿ ವರ್ಗಾವಣೆ ಮಾಡಿದ್ದು, ಕೃಷಿ ಭೂಮಿಯನ್ನು ಕೃಷಿಯೇತರ ಭೂಮಿಯನ್ನಾಗಿ ಬಳಸಿಕೊಳ್ಳಲು ತಮ್ಮ ಅಧಿಕಾರ ವ್ಯಾಪ್ತಿಯನ್ನು ಮೀರಿ ಮೇಲಾಧಿಕಾರಿಗಳಿಗೆ ತಪ್ಪು ಮಾಹಿತಿ ನೀಡಿ ಮಂಜೂರಾತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ ಎಂಬ ಕಾರಣಕ್ಕಾಗಿ ಈ ಕೆಳಕಂಡ ಅಧಿಕಾರಿ ಹಾಗೂ ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಬೀದರ್ ಜಿಲ್ಲಾಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

1) ಶ್ರೀ ಎಸ್. ಡಿ. ಸ್ವಾದಿ, ಹಿಂದಿನ ತಹಶೀಲ್ದಾರ್, ಭಾಲ್ಕಿ, ಹಾಲಿ ನಿವೃತ್ತರು.

2) ಶ್ರೀ ಕಾಶೀನಾಥ್, ಹಿಂದಿನ ಕಂದಾಯ ನಿರೀಕ್ಷಕ, ಹಾಲಿ ನಿವೃತ್ತರು.

3) ಶ್ರೀ ಸುಭಾಷ್, ಹಿಂದಿನ ಗ್ರಾಮ ಲೆಕ್ಕಿಗ, ತಾಲ್ಲೂಕು ಕಛೇರಿ, ಭಾಲ್ಕಿ.

ಸದರಿ ಅಧಿಕಾರಿ/ನೌಕರರ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4ರ ವರೆಗೆ) ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರುಗಳ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಎಸ್. ಡಿ. ಸ್ವಾದಿ, ಹಿಂದಿನ ತಹಶೀಲ್ದಾರ್, ಶ್ರೀ ಸುಭಾಷ್, ಗ್ರಾಮಲೆಕ್ಕಿಗ, ಶ್ರೀ ಕಾಶೀನಾಥ್‌ರಾವ್, ಕಂದಾಯ ನಿರೀಕ್ಷಕ ಇವರುಗಳು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧದ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗೆಳೆದಿರುತ್ತಾರೆ. ಆದುದರಿಂದ ಆರೋಪಿತ ಅಧಿಕಾರಿ/ನೌಕರರ ವಿರುದ್ಧದ ಆರೋಪಗಳು ಹಾಗೂ ಇದಕ್ಕೆ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಸರಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 09 ಎಡಿಇ 2004, ಬೆಂಗಳೂರು ದಿನಾಂಕ: 30ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರಕಾರವು ಶ್ರೀ ಎಸ್. ಡಿ. ಸ್ವಾದಿ, ಹಿಂದಿನ ತಹಶೀಲ್ದಾರ್, ಭಾಲ್ಕಿ, ಮತ್ತು ಶ್ರೀ ಕಾಶೀನಾಥ್ ರಾವ, ಹಿಂದಿನ ಕಂದಾಯ ನಿರೀಕ್ಷಕ, ಭಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ, ಇವರುಗಳು ಹಾಲಿ ಸೇವೆಯಿಂದ ನಿವೃತ್ತರಾಗಿರುವುದರಿಂದ ಹಾಗೂ ಸೇವೆಯಲ್ಲಿರುವ ಶ್ರೀ ಸುಭಾಷ್, ಗ್ರಾಮ ಲೆಕ್ಕಿಗ ಇವರುಗಳ ವಿರುದ್ಧದ ಆರೋಪಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುರುವಿಹಾಳ್ ಅಂಚೆ, ಸಿಂಧನೂರು ತಾಲ್ಲೂಕು ರಾಯಚೂರು ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೀದರ್ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ರಾಯಚೂರು ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 4.3.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೀದರ್ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ವಯ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.487

**ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

**ವಿಷಯ :** ಶ್ರೀ ಕೆ. ಎ. ವಾಮನೆ, ಹಿಂದಿನ ಉಪ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಹಾಲಿ ವಿಶೇಷ ತಹಶೀಲ್ದಾರ್, ಬೆಂಗಳೂರು ಮೆಟ್ರೋಪಾಲಿಟನ್ ಟಾಸ್ಕ ಫೋರ್ಸ್, ಬೆಂಗಳೂರು ಮಹಾನಗರಪಾಲಿಕೆ ಹಾಗೂ ಮತ್ತಿತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ :**

1. ಹಿಂದಿನ ಬೆಂಗಳೂರು ವಿಭಾಗದ ವಿಭಾಗಾಧಿಕಾರಿಗಳ ದಿನಾಂಕ: 9.3.2001ರ ಪತ್ರ ಸಂಖ್ಯೆ: ಸಿಸಿಎ:79/2000-01.
2. ದಿನಾಂಕ: 17.7.02ರ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಡಿ 34 ಎಡಿಇ 2001.
3. ಲಿಖಿತ ಉತ್ತರ.
   1) ಶ್ರೀ ಕೆ. ಎ. ವಾಮನೆ, ಹಿಂದಿನ ಉಪ ತಹಶೀಲ್ದಾರ್, ಹಾಲಿ ವಿಶೇಷ ತಹಶೀಲ್ದಾರ್-ದಿನಾಂಕ: 1.8.2002.
   2) ಶ್ರೀ ಬಿ. ರಾಮಚಂದ್ರಪ್ಪ, ನಿವೃತ್ತ ತಹಶೀಲ್ದಾರ್ - ದಿನಾಂಕ: 17.12.2003.
   3) ಶ್ರೀ ಎಸ್. ಅಮೀರ್ ಸಾಬ್, ಹಿಂದಿನ ಗ್ರಾಮ ಲೆಕ್ಕಿಗ, ಹಾಲಿ ರಾಜಸ್ವ ನಿರೀಕ್ಷಕ, ದಿನಾಂಕ: 23.12.2003.

**ಪ್ರಸ್ತಾವನೆ:**

ಬೆಂಗಳೂರು ಉತ್ತರ ತಾಲ್ಲೂಕು ಹೆಸರುಘಟ್ಟ ಹೋಬಳಿ ಇಟಗಲ್‌ಪುರ ಗ್ರಾಮದ ಸ.ನಂ.50 ರಲ್ಲಿ 8 ಎಕರೆ 18 ಗುಂಟೆ ಸರ್ಕಾರಿ ಜಮೀನನ್ನು ಅಕ್ರಮವಾಗಿ ಖಾತೆ ಮಾಡಿರುವರೆಂಬ ಕಾರಣಕ್ಕಾಗಿ ಆರೋಪಿತರೆಂದು ಹೇಳಲಾಗಿರುವವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಹಿಂದಿನ ಬೆಂಗಳೂರು ವಿಭಾಗಾಧಿಕಾರಿಯವರು ಸರ್ಕಾರವನ್ನು ಕೋರಿರುತ್ತಾರೆ.

**ಶ್ರೀಯುತರು:**

1. ಕೆ. ಎ. ವಾಮನೆ, ಹಿಂದಿನ ಉಪ ತಹಶೀಲ್ದಾರ್, ಹೆಸರುಘಟ್ಟ ಹೋಬಳಿ, ಹೊಸಕೋಟೆ ತಾಲ್ಲೂಕು ಹಾಲಿ ಕಂದಾಯ ಅಧಿಕಾರಿ, ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆ.
2. ಬಿ. ರಾಮಚಂದ್ರಪ್ಪ, ಹಿಂದಿನ ಉಪ ತಹಶೀಲ್ದಾರ್, ಹೆಸರುಘಟ್ಟ ಹೋಬಳಿ, ಹಾಲಿ ನಿವೃತ್ತರು.
3. ಎಸ್. ಅಮೀರ್ ಸಾಬ್, ಗ್ರಾಮ ಲೆಕ್ಕಿಗ, ಹೆಸರುಘಟ್ಟ ಹೋಬಳಿ ಹಾಲಿ ರಾಜಸ್ವ ನಿರೀಕ್ಷಕ, ದಾಸನಪುರ, ಹೊಸಕೋಟೆ ತಾಲ್ಲೂಕು.

ಸದರಿ ಸರ್ಕಾರಿ ಜಮೀನಿನ ಬಗ್ಗೆ ಯಾವುದೇ ಪರಿಶೀಲನೆ ಮಾಡದೆ ಸರ್ಕಾರಿ ಜಮೀನಿನ ಮ್ಯುಟೇಷನನ್ನು ಬೇರೆಯವರ ಹೆಸರಿನಲ್ಲಿ ಅಂಗೀಕರಿಸಿದ್ದು, ಅದರಿಂದಾಗಿ ಸರ್ಕಾರಿ ಜಮೀನು ಸರ್ಕಾರಕ್ಕೆ ಧಕ್ಕದೆ ನಷ್ಟ ಉಂಟು ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸದರಿ ಆಪಾದಿತರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಇವರುಗಳ ವಿರುದ್ಧದ ಆರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4ರ ವರೆಗೆ) ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರುಗಳ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಕೆ. ಎ. ವಾಮನೆ, ಶ್ರೀ ಎಸ್. ಅಮೀರ್ ಸಾಬ್ ಮತ್ತು ಶ್ರೀ ಬಿ. ರಾಮಚಂದ್ರಪ್ಪ, ಇವರುಗಳು ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ವಿವಿಧ ದಿನಾಂಕಗಳಂದು ತಮ್ಮ ತಮ್ಮ ಲಿಖಿತ ಸಮಜಾಯಿಷಿಗಳನ್ನು ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಆಪಾದಿತರೆಂದು ಹೇಳಲಾಗಿರುವವರಲ್ಲಿ ಒಬ್ಬರಾದ ಶ್ರೀ ಬಿ. ರಾಮಚಂದ್ರಪ್ಪ, ಹಿಂದಿನ ಉಪ ತಹಶೀಲ್ದಾರ್ ಹಾಲಿ ನಿವೃತ್ತ ತಹಶೀಲ್ದಾರ್ ಇವರು ತಮ್ಮ ದಿನಾಂಕ: 17.02.2003ರ ಲಿಖಿತ ಸಮಜಾಯಿಷಿಯಲ್ಲಿ ಈ ಪ್ರಕರಣವು 1994ರಲ್ಲಿ ಜರುಗಿದ್ದು, ತಾವು ಸರ್ಕಾರಿ ಸೇವೆಯಿಂದ ಜುಲೈ 1998ರಲ್ಲಿ ವಯೋ ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(2)(ಬಿ)(ii)ರನ್ವಯ ವಯೋ ನಿವೃತ್ತಿ ಹೊಂದಿದ 4 ವರ್ಷಗಳ ನಂತರ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವುದು ಅವಶ್ಯವಿಲ್ಲದಿರುವುದರಿಂದ ಇವರನ್ನು ಉದ್ದೇಶಿತ ವಿಚಾರಣೆ ಪ್ರಕ್ರಿಯೆಯಿಂದ ಕೈಬಿಡುವಂತೆ ಕೋರಿರುವುದನ್ನು ಪರಿಗಣಿಸಿ ಇವರನ್ನು ಜಂಟಿ ಇಲಾಖಾ ವಿಚಾರಣೆಯಿಂದ ಕೈಬಿಟ್ಟಿರುತ್ತದೆ.

ಉಳಿದ ಇಬ್ಬರು ಆಪಾದಿತರೆಂದು ಹೇಳಲಾದ ಶ್ರೀ ಕೆ. ಎ. ವಾಮನೆ, ಹಿಂದಿನ ಉಪ ತಹಶೀಲ್ದಾರ್, ಹೆಸರುಘಟ್ಟ ಹೋಬಳಿ, ಹೊಸಕೋಟೆ ತಾಲ್ಲೂಕು ಹಾಲಿ ಕಂದಾಯ ಅಧಿಕಾರಿ, ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆ ಮತ್ತು ಶ್ರೀ ಎಸ್. ಅಮೀರ್ ಸಾಬ್, ಗ್ರಾಮ ಲೆಕ್ಕಿಗ, ಹೆಸರುಘಟ್ಟ ಹೋಬಳಿ ಹಾಲಿ ರಾಜಸ್ವ ನಿರೀಕ್ಷಕ, ದಾಸನಪುರ, ಹೊಸಕೋಟೆ ತಾಲ್ಲೂಕು ಇವರುಗಳ ವಿರುದ್ಧ ಮಾಡಲಾಗಿರುವ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗೆಳೆದಿರುತ್ತಾರೆ ಹಾಗೂ ಅವರುಗಳ ವಿರುದ್ಧ ಉದ್ದೇಶಿತ ಶಿಸ್ತು ಕ್ರಮವನ್ನು ಕೈಬಿಡುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ಆರೋಪಿತರಿಬ್ಬರ ವಿರುದ್ಧದ ದೋಷಾರೋಪಣೆಗಳು ಹಾಗೂ ಅವರುಗಳು ಸಲ್ಲಿಸಿರುವ ಲಿಖಿತ ಸಮಜಾಯಿಷಿಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ಜರುಗಿಸುವುದು ಸೂಕ್ತವೆಂದು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 34 ಎಡಿಇ 2001, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ರಡಿಯಲ್ಲಿ ಶ್ರೀ ಕೆ. ಎ. ವಾಮನೆ, ಹಿಂದಿನ ಉಪ ತಹಶೀಲ್ದಾರ್, ಹೆಸರುಘಟ್ಟ ಹೋಬಳಿ, ಹೊಸಕೋಟೆ ತಾಲ್ಲೂಕು ಹಾಲಿ ಕಂದಾಯ ಅಧಿಕಾರಿ, ಬೆಂಗಳೂರು ಮಹಾನಗರ ಕಾರ್ಯಾಚರಣೆ ಪಡೆ ಮತ್ತು ಶ್ರೀ ಎಸ್. ಅಮೀರ್ ಸಾಬ್, ಗ್ರಾಮ ಲೆಕ್ಕಿಗ, ಹೆಸರುಘಟ್ಟ ಹೋಬಳಿ ಹಾಲಿ ರಾಜಸ್ವ ನಿರೀಕ್ಷಕ, ದಾಸನಪುರ, ಹೊಸಕೋಟೆ ತಾಲ್ಲೂಕು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಟಿ. ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ನಂ. 648, 2ನೇ ಅಡ್ಡ ರಸ್ತೆ, 8ನೇ ಮುಖ್ಯ ರಸ್ತೆ, 3ನೇ ಬ್ಲಾಕ್, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ. 5000/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯಿಂದ ಹಾಗೂ ದಿನಾಂಕ: 4.3.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ವಯ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.488

**ಎಂ. ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

**ವಿಷಯ :** ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರನಗರ, ಬೆಂಗಳೂರು ಉತ್ತರ ತಾಲ್ಲೂಕು ಮತ್ತು ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ನೆಲಮಂಗಲ ಬೆಂಗಳೂರು (ಗ್ರಾ) ಇವರ ವಿರುದ್ಧ ದಾಖಲಾದ ಟ್ರಾಪ್ ಪ್ರಕರಣದ ಬಗ್ಗೆ ಕಾನೂನು ಕ್ರಮ ಜರುಗಿಸಲು ಮಂಜೂರಾತಿ ಕುರಿತು.

**ಓದಲಾಗಿದೆ :**
1. ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರಸಂಖ್ಯೆ: ಲೋಕ್/ ಐಎನ್‌ವಿ (ಜಿ)/ ಸಿಟಿ/ಕ್ರೈಂ.36/2002, ದಿನಾಂಕ: 28.10.2003.
2. ಸರ್ಕಾರದ ಸಮ ಸಂಖ್ಯೆಯ ಆದೇಶ ದಿನಾಂಕ: 2.8.2004.
3. ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ/ ಐಎನ್‌ವಿ (ಜಿ)/ಸಿಟಿ/ಕ್ರೈಂ/36/2002, ದಿನಾಂಕ: 16.9.2004.
4. ಸಮ ಸಂಖ್ಯೆಯ ಆದೇಶದ ದಿನಾಂಕ: 29.3.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 28.10.2003ರ ಪತ್ರದಲ್ಲಿ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಎಂ. ಪುಟ್ಟಸ್ವಾಮಿ, (ಹಿಂದಿನ) ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು ಇವರು ಫಿರ್ಯಾದುದಾರರಾದ ಶ್ರೀ ಶಿವಕುಮಾರ್ ಅಡ್ವೋಕೇಟ್, ರಾಜಾಜಿನಗರ, ಬೆಂಗಳೂರು ಇವರ ಮೂಲಕ ಶ್ರೀ ಲಾರೆನ್ಸ್ ಡಾಮ್ನಿಕ್ ಪಿಂಟೋ, ಬಿನ್ ಲೋವಿಯನ್ ಪಿಂಟೋ, ನಂ.2132, 8ನೇ ಮುಖ್ಯ ರಸ್ತೆ, 'ಡಿ' ಬ್ಲಾಕ್ 2ನೇ ಹಂತ, ರಾಜಾಜಿನಗರ, ಬೆಂಗಳೂರು ಇವರ ಸ್ವಾಧೀನಾನುಭವದಲ್ಲಿರುವ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ಹಂದರಹಳ್ಳಿ ಗ್ರಾಮದ ನಿವೇಶನ ಸಂಖ್ಯೆ: 76ನ್ನು ಶ್ರೀಮತಿ ಆರ್. ಜಯಲಕ್ಷ್ಮೀ ಕೋಂ ಶ್ರೀ ಚನ್ನಗಂಗಯ್ಯ, ನಂ. 41, 1ನೇ ಮುಖ್ಯ ರಸ್ತೆ, ಪಾಪಯ್ಯ ಗಾರ್ಡನ್, ಕೆ.ಹೆಚ್.ಬಿ. ಕಾಲೋನಿ, ಬೆಂಗಳೂರು 79ರಲ್ಲಿ ವಾಸವಾಗಿರುವ ಇವರು ಮತ್ತು ಇದೇ ಮೇಲ್ಕಂಡ ಸದರಿ ಲಾರೆನ್ಸ್ ಡಾಮ್ನಿಕ್ ಪಿಂಟೋರವರ ಮತ್ತೊಂದು ನಿವೇಶನ ಸಂಖ್ಯೆ: 75ನ್ನು ಶ್ರೀ ಜಿ. ಸ್ವಾಮಿ ಬಿನ್ ದಿವಂಗತ ಶ್ರೀ ಗಂಗಪ್ಪ ನಂ. 19, ಅನಂತ ನಿಲಯ, 3ನೇ ಕ್ರಾಸ್, ಜಾರಕ ಬಂಡೆ ಕಾವಲ್ ಗಣೇಶ್ ಬ್ಲಾಕ್, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು-96ರಲ್ಲಿ ವಾಸವಾಗಿರುವ ಇವರು ಶುದ್ಧ ಕ್ರಯಕ್ಕೆ ಖರೀದಿಸಿದ್ದು, ಮೇಲ್ಕಂಡ ಸದರಿ ನಿವೇಶನಗಳನ್ನು ನೋಂದಣಿ ಮಾಡಲು ಪ್ರತಿ ನಿವೇಶನಕ್ಕೆ ರೂ.1,500/- ರಂತೆ ಒಟ್ಟು ಎರಡು ನಿವೇಶನಗಳ ನೋಂದಣಿಗೆ ಅಕ್ರಮ ಸಂಭಾವನೆಯಾಗಿ ರೂ. 3,000/- ಗಳನ್ನು ದಿನಾಂಕ: 23.10.2002 ರಂದು ಪಡೆಯುತ್ತಿದ್ದಾಗ ಲೋಕಾಯುಕ್ತರು ಬೀಸಿದ ಬಲೆಗೆ ಸಿಕ್ಕಿ ಬಿದ್ದಿರುವುದರಿಂದ, ಸದರಿಯವರ ವಿರುದ್ಧ ಲಂಚ ನಿರೋಧ ಕಾಯ್ದೆ, 1988ರ ಕಲಂ-7,13(1)(ಡಿ) ಮತ್ತು ಕಲಂ 13(2) ರಡಿಯಲ್ಲಿ ಕ್ರಮ ಜರುಗಿಸಲು ಅಭಿಯೋಜನಾ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು, ಮತ್ತು ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ನೆಲಮಂಗಲ ಉಪ ನೋಂದಣಿ ಕಛೇರಿ, ಬೆಂಗಳೂರು(ಗ್ರಾ) ಜಿಲ್ಲೆ, ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡಲಾಗಿತ್ತು, ಆದರೆ ಮೇಲೆ ಓದಲಾದ(3)ರ ಪತ್ರದಲ್ಲಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಇವರು ಸದರಿ ಆದೇಶ ಪತ್ರವನ್ನು ಅವಲೋಕಿಸಲಾಗಿ, ಪ್ರಸ್ತಾವನೆಯ ಮೊದಲ ಭಾಗದಲ್ಲಿ ಆರೋಪಿತರು ಫಿರ್ಯಾದುದಾರಿಂದ ಲಂಚದ ಹಣವನ್ನು ಪಡೆದ ಬಗ್ಗೆ ಸಂಕ್ಷಿಪ್ತವಾಗಿ ನಮೂದಿಸಿದ್ದು, ತದನಂತರ ಮುಂದಿನ ಭಾಗದಲ್ಲಿ, ನೇರವಾಗಿ ಆರೋಪಿತರನ್ನು ಅಭಿಯೋಜನೆಗೊಳಪಡಿಸಲು ಮಂಜೂರಾತಿಯನ್ನು ನೀಡಿದ್ದು, ಆದೇಶ ಪತ್ರದಲ್ಲಿರಬೇಕಾಗಿದ್ದ ಬಹು ಮುಖ್ಯವಾದ ಎರಡು ಘಟಕಗಳು, ಅರ್ಥಾತ್ (1) ಸಕ್ಷಮ ಪ್ರಾಧಿಕಾರಿಯು ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿರುವುದಾಗಿಯೂ, ಮತ್ತು (ii) ಮನವರಿಕೆ ಮಾಡಿಕೊಂಡ ನಂತರವೇ ಅಭಿಯೋಜನೆಗೆ ಒಳಪಡಿಸಬೇಕೆಂಬ ವಿಚಾರಕ್ಕೆ ಬರಲಾಯಿತು, ಎಂಬುದನ್ನು ಪ್ರಸ್ತಾಪಿಸಿರುವುದಿಲ್ಲ. ಸಕ್ಷಮ ಪ್ರಾಧಿಕಾರವು ಯಾವ ಯಾವ ದಾಖಲಾತಿಗಳನ್ನು ಪರಿಶೀಲಿಸಿತು ಹಾಗೂ ಯಾವ ಯಾವ ಅಂಶಗಳು ಆ ದಾಖಲಾತಿಗಳಿಂದ ಹೊರಪಟ್ಟವು ಎಂಬ ಬಗ್ಗೆ ಮಂಜೂರಾತಿ ಆದೇಶದ ಯಾವ ಭಾಗದಲ್ಲಿಯೂ ವಿಶ್ಲೇಷಿಸಿರುವುದಿಲ್ಲ. ಅಲ್ಲದೆ ಮಂಜೂರಾತಿ ನೀಡುವ ಮೊದಲು, ತನಿಖಾ ದಾಖಲಾತಿಗಳು ಯಾರಿಂದ ಪರಿಶೀಲಿಸಲ್ಪಟ್ಟಿತು ಎಂಬ ಬಗ್ಗೆ ಆದೇಶ ಪತ್ರದಲ್ಲಿ ನಮೂದಿಸಿರುವುದಿಲ್ಲವೆಂದೂ ಹಾಗೂ ಮಾನ್ಯ ಸರ್ವೋಚ್ಚ ಹಾಗೂ ರಾಜ್ಯದ ಉಚ್ಚ ನ್ಯಾಯಾಲಯಗಳ ತೀರ್ಮಾನಗಳ ಪ್ರಕಾರ, ಸಕ್ಷಮ ಪ್ರಾಧಿಕಾರವು, ತನಿಖಾ ಕಾಲದಲ್ಲಿ ಸಂಗ್ರಹಿಸಿರುವ ಸಾಕ್ಷ್ಯಗಳನ್ನು ಮನದಟ್ಟು ಮಾಡಿಕೊಳ್ಳತಕ್ಕದ್ದು ಮತ್ತು ಸದರಿ ಸಾಕ್ಷ್ಯವು ಸಾರ್ವಜನಿಕ ನೌಕರನ ವಿರುದ್ಧ ಪ್ರಕರಣವನ್ನು ಸಾಬೀತು ಮಾಡಲು ಸಹಕಾರಿ ಯಾಗುವುದೇ ಎಂಬ ಬಗ್ಗೆ ಸ್ವತಂತ್ರವಾಗಿ ಅಭಿಪ್ರಾಯಿಸಬೇಕಾಗಿರುತ್ತದೆ. ಎಂದು ತಿಳಿಸಿ, ಸಕ್ಷಮ ಪ್ರಾಧಿಕಾರವು, ತನಿಖಾ ಪಾರುಪತ್ಯದವರು ತನಿಖಾ ಕಾಲದಲ್ಲಿ ಸಂಗ್ರಹಿಸಿರುವ ಎಲ್ಲಾ ಸಾಕ್ಷ್ಯಗಳನ್ನು ಅವಲೋಕಿಸಬೇಕಾಗಿದ್ದು, ಹಾಗೂ ಸಾರ್ವಜನಿಕ ನೌಕರನ ವಿರುದ್ಧ ಮಾಡಲಾದ ಅಪಾದನೆಗಳು ಸರಿಯಾಗಿ ಆಧಾರಿತವಾಗಿವೆ ಎಂಬ ಬಗ್ಗೆ ಕಾರಣಗಳನ್ನು ದಾಖಲಿಸಬೇಕಾಗಿರುತ್ತದೆಯೆಂದು, ಒಂದು ವೇಳೆ ವಿವೇಚನೆಯನ್ನು ಬಳಸದೇ ಹಾಗೂ ಯಾಂತ್ರಿಕವಾಗಿ ಮಂಜೂರಾತಿಯನ್ನು ನೀಡಿದಲ್ಲಿ, ಅಂತಹ ಆದೇಶವು ನ್ಯಾಯಾಲಯದಲ್ಲಿ ಅಸಿಂಧುವಾಗುವುದೆಂದು ಸಹ ಸರ್ವೋಚ್ಚ ನ್ಯಾಯಾಲಯವು ಅಭಿಪ್ರಾಯಪಟ್ಟಿರುತ್ತದೆ ಎಂದು ತಿಳಿಸಿ ಇಂತಹ ನಕಲು ಪ್ರತಿಗಳನ್ನು ನ್ಯಾಯಾಲಯವು ಪರಿಗಣಿಸುತ್ತಿಲ್ಲವಾದ್ದರಿಂದ ಕಛೇರಿಯ ಮೊಹರನ್ನು ಒಳಗೊಂಡಂತೆ ಮಂಜೂರಾತಿ ಆದೇಶ ಪತ್ರದ ಮೂಲ ಪ್ರತಿಯು ಅವಶ್ಯಕವಾಗಿರುತ್ತದೆಯೆಂದೂ ಸಹ ತಿಳಿಸಿ ದಿನಾಂಕ: 2.8.2004ರ ಆದೇಶದ ಪ್ರತಿಯನ್ನು ಹಿಂತಿರುಗಿಸುತ್ತಾ ಸಕ್ಷಮ ಪ್ರಾಧಿಕಾರಿಯ ಶಾಯಿ ಸಹಿ ಹಾಗೂ ಕಛೇರಿಯ ಮೊಹರನ್ನು ಒಳಗೊಂಡಂತೆ ಅವರ ಪತ್ರದೊಂದಿಗೆ ಲಗತ್ತಿಸಿರುವ ಮಂಜೂರಾತಿ ಆದೇಶ ಪತ್ರದ ಪ್ರತಿಯನ್ನು ಕಳುಹಿಸಿಕೊಡುವಂತೆ ಕೋರಿರುತ್ತಾರೆ.

ದಿನಾಂಕ: 2.8.2004ರ ಸರ್ಕಾರದ ಆದೇಶವನ್ನು ಮಾರ್ಪಾಡಿಸುವ ಬಗ್ಗೆ ಕಾನೂನು ಇಲಾಖೆಯೊಂದಿಗೆ ಸಮಾಲೋಚಿಸಲಾಗಿದ್ದು, ಲೋಕಾಯುಕ್ತರವರು ನೀಡಿರುವ ಮಾದರಿಯನ್ವಯ ಸರ್ಕಾರಿ ಆದೇಶ ಮಾರ್ಪಡಿಸುವ ಅಗತ್ಯತೆ ಇರುವುದಿಲ್ಲವೆಂಬ ಅಭಿಪ್ರಾಯಕ್ಕೆ ಬರಲಾಯಿತಾದರೂ ಸಕ್ಷಮ ಪ್ರಾಧಿಕಾರಿಯು ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಮನವರಿಕೆ ಮಾಡಿಕೊಂಡ ನಂತರವೇ ಅಭಿಯೋಜನೆಗೆ ಒಳಪಡಿಸಬೇಕೆಂಬ ತೀರ್ಮಾನಕ್ಕೆ ಬರಲಾಗಿದೆ ಎಂಬ ವಾಕ್ಯ ಬರಬೇಕೆಂಬ ತೀರ್ಮಾನಕ್ಕೆ ಬಂದ ಕಾರಣ ದಿನಾಂಕ: 2.8.2004ರ ಆದೇಶವನ್ನು ಮೇಲೆ ಓದಲಾದ (4)ರ ಆದೇಶದಲ್ಲಿ ಹಿಂತೆಗೆದುಕೊಳ್ಳಲಾಗಿದೆ.

ಮೇಲಿನ ಕಾರಣಗಳಿಂದ ಪ್ರಕರಣವನ್ನು ಕೂಲಂಕುಷವಾಗಿ ಪರಿಶೀಲಿಸಿ, ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು, ಮತ್ತು ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ನೆಲಮಂಗಲ ಉಪ ನೋಂದಣಿ ಕಛೇರಿ, ಬೆಂಗಳೂರು (ಗ್ರಾ) ಜಿಲ್ಲೆ, ಇವರು ಲಂಚಾರೋಪಕ್ಕೆ ಒಳಗಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ ಹಾಗೂ ಅವರ ವಿರುದ್ಧ ಗಂಭೀರವಾದ ಅಪಾದನೆ ಇರುವುದರಿಂದ ಸಕ್ಷಮ ಪ್ರಾಧಿಕಾರಿಯು ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಮನವರಿಕೆ ಮಾಡಿಕೊಂಡ ನಂತರ ಅಪಾದಿತರನ್ನು ಅಭಿಯೋಜನೆಗೆ ಒಳಪಡಿಸಬೇಕೆಂಬ ತೀರ್ಮಾನಕ್ಕೆ ಬರಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 65 ಮುನೋಸೇ (2) 2003, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು, ಮತ್ತು ಹಾಲಿ ಹಿರಿಯ ಉಪ ನೋಂದಣಾಧಿಕಾರಿ, ನೆಲಮಂಗಲ ಉಪ ನೋಂದಣಿ ಕಛೇರಿ, ಬೆಂಗಳೂರು (ಗ್ರಾ) ಜಿಲ್ಲೆ, ಇವರನ್ನು ಲಂಚ ನಿರೋಧ ಕಾಯಿದೆ, 1988ರ ಕಲಂ 7,13(1)(ಡಿ) ಹಾಗೂ 13(2)ರಂತೆ ಶಿಕ್ಷಾರ್ಹ ಅಪರಾಧ ಎಸಗಿರುವುದರಿಂದ ಸದರಿಯವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮೇಲ್ಕಂಡ ಕಾಯ್ದೆಯ ಕಲಂ-19ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮಂಜೂರಾತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರ ಅಡಿಯಲ್ಲಿ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ 24.3.2005 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.494

**ಎಂ. ಪಿ. ಮಂಜುನಾಥ್**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

## ಲೋಕೋಪಯೋಗಿ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಹೆದ್ದಾರಿಗಳನ್ನು 3 ವರ್ಷಗಳ ಅವಧಿಗೆ ನಿರ್ವಹಣೆ ಮಾಡುವ ಕುರಿತು ಆಡಳಿತಾತ್ಮಕ ಅನುಮೋದನೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಲೋಇ 263 ಸಿಎಸ್‌ಆರ್ 2000 ಬೆಂಗಳೂರು, ದಿನಾಂಕ: 1.2.2001.

2. ಸರ್ಕಾರದ ಆದೇಶ ಸಂಖ್ಯೆ: ಲೋಇ 10 ಇಎಪಿ 2004 ಬೆಂಗಳೂರು, ದಿನಾಂಕ: 24.12.2004.

**ಪ್ರಸ್ತಾವನೆ:**

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ರಾಜ್ಯ ಹೆದ್ದಾರಿಗಳ 3 ವರ್ಷಗಳ ಅವಧಿಯ ನಿರ್ವಹಣೆಯನ್ನು ಕೈಗೊಂಡಿದ್ದು, ಈ ಯೋಜನೆಯು ಏಪ್ರಿಲ್ ತಿಂಗಳ 2004 ರಂದು ಅಂತ್ಯಗೊಂಡಿರುತ್ತದೆ. ಸದರಿ ಯೋಜನೆಯನ್ನು ಮುಂದಿನ 3 ವರ್ಷಗಳ ಅವಧಿಗೆ ಮುಂದುವರೆಸಲು ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ರಾಜ್ಯ ಹೆದ್ದಾರಿಗಳ ನಿರ್ವಹಣೆಯನ್ನು ಏಪ್ರಿಲ್ 2005 ರಿಂದ ರೂ. 458.00 (ರೂಪಾಯಿ ನಾಲ್ಕು ನೂರ ಐವತ್ತೆಂಟು ಕೋಟಿಗಳು ಮಾತ್ರ) ಕೋಟಿಗಳ ಮೊತ್ತದಲ್ಲಿ ಕೈಗೊಳ್ಳಲು ಅನುಮೋದನೆ ನೀಡಲಾಗಿದೆ.

ಈ ಸಂಬಂಧ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು 7385 ಕಿಮೀ.ಗೆ ರೂ.228.88 ಕೋಟಿ (ಇನ್ನೂರ ಇಪ್ಪತ್ತೆಂಟು ಕೋಟಿ ಎಂಬತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಮೊತ್ತ ಮತ್ತು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ರವರು 6488 ಕಿಮೀ.ಗೆ ರೂ. 195.84 ಕೋಟಿ ಅಂದಾಜು ಮೊತ್ತದಲ್ಲಿ (ಒಂದು ನೂರ ತೊಂಬತ್ತೈದು ಕೋಟಿ ಎಂಬತ್ತನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ರಾಜ್ಯ ಹೆದ್ದಾರಿಗಳ 3 ವರ್ಷಗಳ ಅವಧಿಯ ನಿರ್ವಹಣೆಗಾಗಿ ಒಟ್ಟು 13873 ಕಿಮೀ. ರಸ್ತೆ ನಿರ್ವಹಣೆಗೆ ರೂ. 424.72 (ನಾಲ್ಕುನೂರ ಇಪ್ಪತ್ತನಾಲ್ಕು ಕೋಟಿ ಎಪ್ಪತ್ತೆರಡು ಲಕ್ಷರೂಪಾಯಿಗಳು ಮಾತ್ರ) ಕೋಟಿಗಳಿಗೆ ಪ್ರಸ್ತಾವನೆ ಸಲ್ಲಿಸಿದ್ದು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ಕೋರಿರುತ್ತಾರೆ. ಅದರಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 3 ಇಎಪಿ 2005 ಬೆಂಗಳೂರು, ದಿನಾಂಕ: 19/21ನೇ ಮಾರ್ಚ್ 2005**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರಾಜ್ಯ ಹೆದ್ದಾರಿಗಳ 3 ವರ್ಷಗಳ ಅವಧಿಯ ನಿರ್ವಹಣೆಯನ್ನು 2005ನೇ ಏಪ್ರಿಲ್ 1 ರಿಂದ ಪ್ರಾರಂಭಿಸಲು ರೂ. 424.72 (ನಾಲ್ಕುನೂರ ಇಪ್ಪತ್ತನಾಲ್ಕು ಕೋಟಿ ಎಪ್ಪತ್ತೆರಡು ಲಕ್ಷ ರೂಪಾಯಿಗಳು ಮಾತ್ರ) ಕೋಟಿಗಳ ಮೊತ್ತದ ಈ ಕೆಳಕಂಡ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

| ಕ್ರಮ ಸಂಖ್ಯೆ | ವಿಭಾಗದ ಹೆಸರು | ಉದ್ದ ಕಿಮೀ.ಗಳಲ್ಲಿ | (ರೂ.ಲಕ್ಷಗಳಲ್ಲಿ) |
|---|---|---|---|
| 1. | ಬೆಂಗಳೂರು ಪ್ಯಾಕೇಜ್-1 | 268.00 | 829.25 |
| 2. | ಬೆಂಗಳೂರು ಪ್ಯಾಕೇಜ್-2 | 253.00 | 782.75 |
| 3. | ತುಮಕೂರು ಪ್ಯಾಕೇಜ್-1 | 276.00 | 853.74 |
| 4. | ತುಮಕೂರು ಪ್ಯಾಕೇಜ್-2 | 465.00 | 1440.66 |
| 5. | ಕೋಲಾರ್ ಪ್ಯಾಕೇಜ್-1 | 318.00 | 983.94 |
| 6. | ಕೋಲಾರ್ ಪ್ಯಾಕೇಜ್-2 | 367.00 | 1137.08 |
| 7. | ಮೈಸೂರು ಪ್ಯಾಕೇಜ್-1 | 383.00 | 1184.45 |
| 8. | ಮೈಸೂರು ಪ್ಯಾಕೇಜ್-2 | 248.00 | 767.75 |
| 9. | ಚಾಮರಾಜನಗರ | 337.00 | 1044.70 |
| 10. | ಮಂಡ್ಯ | 190.00 | 586.21 |
| 11. | ಹಾಸನ ಪ್ಯಾಕೇಜ್-1 | 362.00 | 1121.33 |
| 12. | ಹಾಸನ ಪ್ಯಾಕೇಜ್-2 | 334.00 | 1034.78 |
| 13. | ಚಿಕ್ಕಮಗಳೂರು ಪ್ಯಾಕೇಜ್-1 | 250.00 | 773.14 |
| 14. | ಚಿಕ್ಕಮಗಳೂರು ಪ್ಯಾಕೇಜ್-2 | 276.00 | 850.95 |
| 15. | ಶಿವಮೊಗ್ಗ ಪ್ಯಾಕೇಜ್-1 | 413.00 | 1279.37 |
| 16. | ಶಿವಮೊಗ್ಗ ಪ್ಯಾಕೇಜ್-2 | 332.00 | 1026.57 |
| 17. | ದಾವಣಗೆರೆ ಪ್ಯಾಕೇಜ್-1 | 258.00 | 798.56 |
| 18. | ದಾವಣಗೆರೆ ಪ್ಯಾಕೇಜ್-2 | 266.00 | 823.36 |
| 19. | ಚಿತ್ರದುರ್ಗ ಪ್ಯಾಕೇಜ್-1 | 212.00 | 657.20 |
| 20. | ಚಿತ್ರದುರ್ಗ ಪ್ಯಾಕೇಜ್-2 | 196.00 | 605.74 |
| 21. | ಮಂಗಳೂರು | 523.00 | 1621.23 |
| 22. | ಉಡುಪಿ | 353.00 | 1092.75 |
| 23. | ಕೊಡಗು | 514.00 | 1592.66 |
| | **ದಕ್ಷಿಣ ವಲಯ** | **7385** | **22888.17** |
| 24. | ಧಾರವಾಡ | 394.00 | 1182.00 |
| 25. | ಗದಗ | 439.00 | 1318.00 |
| 26. | ಹಾವೇರಿ | 250.00 | 749.00 |
| 27. | ಕಾರವಾರ | 372.00 | 1115.00 |

| ಕ್ರಮ ಸಂಖ್ಯೆ | ವಿಭಾಗದ ಹೆಸರು | ಉದ್ದ ಕಿಮೀ.ಗಳಲ್ಲಿ | (ರೂ.ಲಕ್ಷಗಳಲ್ಲಿ) |
|---|---|---|---|
| 28. | ಬೆಳಗಾಂ ಪ್ಯಾಕೇಜ್-1 | 434.00 | 1300.50 |
| 29. | ಬೆಳಗಾಂ ಪ್ಯಾಕೇಜ್-2 | 299.10 | 901.50 |
| 30. | ಚಿಕ್ಕೋಡಿ ಪ್ಯಾಕೇಜ್-1 | 273.00 | 816.84 |
| 31. | ಚಿಕ್ಕೋಡಿ ಪ್ಯಾಕೇಜ್-2 | 584.00 | 1749.69 |
| 32. | ಬಿಜಾಪುರ ಪ್ಯಾಕೇಜ್-1 | 252.00 | 756.00 |
| 33. | ಬಿಜಾಪುರ ಪ್ಯಾಕೇಜ್-2 | 199.00 | 596.00 |
| 34. | ಬಾಗಲಕೋಟೆ | 462.00 | 1385.00 |
| 35. | ಬಳ್ಳಾರಿ | 523.00 | 1628.00 |
| 36. | ರಾಯಚೂರು | 382.00 | 1184.00 |
| 37. | ಕೊಪ್ಪಳ | 362.00 | 1086.00 |
| 38. | ಗುಲ್ಬರ್ಗ ಪ್ಯಾಕೇಜ್-1 | 266.00 | 804.00 |
| 39. | ಗುಲ್ಬರ್ಗ ಪ್ಯಾಕೇಜ್-2 | 287.00 | 861.00 |
| 40. | ಯಾದಗೀರ | 305.00 | 915.00 |
| 41. | ಬೀದರ್ ಪ್ಯಾಕೇಜ್-1 | 175.00 | 523.50 |
| 42. | ಬೀದರ್ ಪ್ಯಾಕೇಜ್-2 | 238.00 | 713.16 |
| | **ಉತ್ತರ ವಲಯ** | **6488.00** | **19584.19** |
| | **ಒಟ್ಟು** | **13873.00** | **42472.36** |

ರಾಜ್ಯ ಹೆದ್ದಾರಿಗಳ ನಿರ್ವಹಣೆ ಕಾಮಗಾರಿಗಳನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ನೀಡಲಾಗಿರುವ ನಿಬಂಧನೆಗಳು ಮತ್ತು ಷರತ್ತುಗಳನ್ನೊಳಪಟ್ಟಂತೆ ಕೈಗೊಳ್ಳುವುದು ಹಾಗೂ ಅಂದಾಜುಗಳಿಗೆ ತಾಂತ್ರಿಕ ಮಂಜೂರಾತಿಯನ್ನು ಸಂಬಂಧಪಟ್ಟ ಮುಖ್ಯ ಇಂಜಿನಿಯರ್‌ಗಳಿಂದ ನೀಡುವುದು. ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 5054-80-190-0-01-211 ಅಡಿಯಲ್ಲಿ ಭರಿಸಬಹುದಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 1133/ಎಫ್‌ಸಿ-1/2005 ದಿನಾಂಕ: 19.11.2004ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.493

**ಟಿ. ಸುಕುಮಾರ್**

ಸರ್ಕಾರದ ಕಾರ್ಯದರ್ಶಿ ಲೋಕೋಪಯೋಗಿ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಅನುಷ್ಠಾನ ಮಾಡಲು ಉಚಿತ ವಿದ್ಯುತ್ ಸರಬರಾಜು ಬಗ್ಗೆ.

**ಪ್ರಸ್ತಾವನೆ:**

ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಅನುಷ್ಠಾನದಲ್ಲಿ ಇಂಧನ ಮೀಟರ್ ಜೋಡಣೆ ಬಗ್ಗೆ ಹಾಗೂ ಬಾಕಿ ಮೊತ್ತವನ್ನು ಮನ್ನಾ ಮಾಡುವ ಬಗ್ಗೆ, ಈ ಜೋಡಣೆಗಳಿಗೆ ಉಚಿತ ವಿದ್ಯುತ್ ನೀಡುವ ಬಗ್ಗೆ ವಿಧಾನಸಭೆಯಲ್ಲಿ ಚರ್ಚಿಸಲಾಗಿತ್ತು. ಈ ಬಗ್ಗೆ ಮಾನ್ಯ ಕೈಗಾರಿಕಾ ಸಚಿವರು ಹಾಗೂ ಮಾನ್ಯ ಲೋಕೋಪಯೋಗಿ ಮತ್ತು ಇಂಧನ ಸಚಿವರು ನೀಡಿರುವ ಭರವಸೆ ಹಿನ್ನೆಲೆಯಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತರವರು ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಅನುಷ್ಠಾನದಲ್ಲಿ ಪ್ರತಿ ತಿಂಗಳಿಗೆ 18 ಯೂನಿಟ್ ಮುಕ್ತ ವಿದ್ಯುತ್ ನೀಡುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ. ಮುಕ್ತ ಇಂಧನ ಸರಬರಾಜು ಮಾಡಿದಲ್ಲಿ, ಪ್ರತಿ ತಿಂಗಳು 4.3 ಕೋಟಿ ರೂ.ನಂತೆ ಸುಮಾರು 51.6 ಕೋಟಿಗಳಷ್ಟು ವರ್ಷಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸರ್ಕಾರವು ಧನ ಸಹಾಯ ಮಾಡಬೇಕಾಗಿರುತ್ತದೆ. ಈ ಅನುಷ್ಠಾನದಲ್ಲಿ ಬಾಕಿ ಶುಲ್ಕವನ್ನು ಮನ್ನಾ ಮಾಡಲು ವಿದ್ಯುತ್ ಸರಬರಾಜು ಕಂಪನಿಗಳಿಗೆ ಸರ್ಕಾರ ಮರು ಪಾವತಿಸಬೇಕೆಂದು ತಿಳಿಸಿರುತ್ತಾರೆ. ಪ್ರತಿ ವರ್ಷ, ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಅನುಷ್ಠಾನದ ಹೊಸ ಸರಬರಾಜು ಸಂಖ್ಯೆಗನುಗುಣವಾಗಿ ಸರ್ಕಾರ ಹೆಚ್ಚಿನ ಸಬ್ಸಿಡಿ ಮೊತ್ತವನ್ನು ಭರಿಸಬೇಕಾಗಿರುತ್ತದೆ ಎಂದು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ದಿನಾಂಕ: 24.11.2004ರ ಪತ್ರದಲ್ಲಿ ಸಲ್ಲಿಸಿದ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸಚಿವಸಂಪುಟವು ನೀಡಿದ ಅನುಮೋದನೆಯಂತೆ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಒಳಗೊಂಡು, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

1. ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಅನುಷ್ಠಾನದಲ್ಲಿರುವುದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ಇಂಧನ ಒದಗಿಸಲು, ಇದಕ್ಕಿಂತ ಹೆಚ್ಚು ಬಳಕೆಯಾದಲ್ಲಿ ಹೊರ ಜೋಡಣೆಯಲ್ಲಿ ನಿಗದಿತ ಶುಲ್ಕದ ಜೊತೆ ನಿಗದಿತ ಹಂತದವರೆಗೆ ಎಲ್.ಟಿ.2(ಎ) ಸುಂಕವನ್ನು ಬಿಲ್ಲಿಂಗ್ ಮಾಡುವುದು.
2. ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಅನುಷ್ಠಾನದಲ್ಲಿ ಹಂತ ಹಂತವಾಗಿ ಮೀಟರ್ ಅಳವಡಿಸಲು ಮತ್ತು ಈ ಕಾರ್ಯವನ್ನು 2005 ಏಪ್ರಿಲ್ ಅಂತ್ಯದೊಳಗೆ ಪೂರ್ಣಗೊಳಿಸುವುದು.
3. ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಅನುಷ್ಠಾನದಲ್ಲಿ ಪ್ರತಿ ವರ್ಷ ವಿದ್ಯುತ್ ಸರಬರಾಜು ಕಂಪನಿಗಳು ಕೋರಿದ ಮೊತ್ತಕ್ಕೆ ಸಮಾನವಾದ ಸಬ್ಸಿಡಿ ಮೊತ್ತವನ್ನು ಸರ್ಕಾರವು ಭರಿಸುವುದು.
4. ದಿನಾಂಕ: 31.12.2004 ರಲ್ಲಿದ್ದಂತಹ ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಬಾಕಿಯನ್ನು ಮನ್ನಾ ಮಾಡುವುದು ಮತ್ತು ದಿನಾಂಕ: 31.12.2004ರ ವರೆಗೆ ಸ್ಥಾಪಿಸಲಾಗಿರುವ ಭಾಗ್ಯಜ್ಯೋತಿ/ ಕುಟೀರ ಜ್ಯೋತಿ ಬಾಕಿಯನ್ನು ಮನ್ನಾ ಮಾಡಲು ಕರ್ನಾಟಕ ಸರ್ಕಾರವು ವಿದ್ಯುತ್ ಸರಬರಾಜು ಕಂಪನಿಗಳಿಗೆ ರೂ.157.21 ಕೋಟಿಗಳನ್ನು ಮರು ಪಾವತಿ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.457

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.